# ಸಿದ್ಧಗಂಗಾ



"ಶ್ರೀ ಕ್ಷೇತ್ರದಲ್ಲಿ ಜರುಗಿದ ಸುವರ್ಣ ಮಹೋತ್ಸವ ಸಂದರ್ಭದ ಶಿವಾನುಭವಗೋಷ್ಠಿಯಲ್ಲಿ"

ತರಳಬಾಳು ಜಗದ್ಗುರು ಡಾ|| ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು ಶ್ರೀ ಶ್ರೀಗಳವರು, ಹುಬ್ಬಳ್ಳಿ ಮೂರು ಸಾವಿರ ಮಠದ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾ ಸ್ವಾಮಿಗಳು, ಧಾರವಾಡದ ಮುರುಘಾ ಮಠದ ಮಹಾಂತ ಶಿವಯೋಗಿಗಳು, ಶ್ರೀ ಗೌರಿಶಂಕರ ಸ್ವಾಮಿಗಳವರು, ಗುಬ್ಬಿ ತೊರೆಮಠದ ಶ್ರೀ ನೀಲಲೋಚನ ಸ್ವಾಮಿಗಳವರು, ಮತ್ತಿತರ ಹರಗುರು ಚರ ಮೂರ್ತಿಗಳವರನ್ನು ಕಾಣಬಹುದು.

ಆಗಸ್ಟ್, 1982

'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ
ಆಜೀವಸದಸ್ಯರ ಬಳಗಕ್ಕೆ ಕೃತಜ್ಞತೆಗಳು

920 ಶ್ರೀ ಆರ್.ಎಸ್.ಕಲ್ಲೋಳ್ಳಿಮಠ್
ರಿ||ಸೂಪರಿಂಟೆಂಡ್ ಇಂಜಿನಿಯರ್
ಮಾಧವನಗರ, ಬೆಂಗಳೂರು—1

921 ಶ್ರೀ ಎಸ್.ಜಿ. ಶಾಸ್ತ್ರಿ
ಚಂದ್ರು ಕ್ಲಾತ್ ಸೆಂಟರ್
ಮರಳವಾಡಿ, ಕನಕಪುರ ತಾ||
ಬೆಂಗಳೂರು ಜಿಲ್ಲೆ.

922 ಶ್ರೀ ಬಿ.ಎಂ. ಸಿದ್ದರಾಮಣ್ಣ
& ಸನ್ಸ್, ವೀಣಾ ಸ್ಟೋರ್ಸ್
ರಾಜಾಜಿನಗರ
ಬೆಂಗಳೂರು—10

923 ಶ್ರೀಮತಿ ಪತ್ರಿ ಗೌರಮ್ಮ
ಬೆಣಚಿಗೆರೆ
ಗುಬ್ಬಿ ತಾ||
ತುಮಕೂರು ಜಿಲ್ಲೆ.

924 ಶ್ರೀ ಹೆಚ್.ಎ.ಶರಣಪ್ಪ
ಬಸವೇಶ್ವರ ನಗರ.
ಬೆಂಗಳೂರು—79

925 ಶ್ರೀ ಬಿ.ಸೀತಪ್ಪ, ಶಿಕ್ಷಕ
ರಾಜಾಜಿನಗರ
ಬೆಂಗಳೂರು—10

926 ಶ್ರೀ ಎ.ಆರ್.ನಾಗರಾಜ್
ರಾಜಾಜಿನಗರ
ಬೆಂಗಳೂರು—10

927 ಶ್ರೀ ಜಿ.ಎಲ್.ಬಸವರಾಜು
ಪ್ರಸಾರಾಂಗ ವಿಭಾಗ
ಡೆಕ್ಕನ್ ಹೆರಾಲ್ಡ್
ಬೆಂಗಳೂರು—1

928 ಶ್ರೀ ಮಹಾಂತ ಸ್ವಾಮಿಗಳು
ಶ್ರೀ ಮಹಂತೇಶ್ವರ ಸ್ವಾಮಿ
ಗದ್ದಿಗೆ ಮಠ, ಮಾಗಡಿ ತಾ||
ಬೆಂಗಳೂರು ಜಿಲ್ಲೆ

929 ವಿದ್ವಾನ್ ಶ್ರೀ ಡಿ. ವಿ.
ಶಿವರುದ್ರಯ್ಯ, ಶಿಕ್ಷಕ
ಅರವಿಂದ ಪ್ರೌಢಶಾಲೆ ಆರೂಡಿ
ದೊಡ್ಡಬಳ್ಳಾಪುರ ತಾ||
ಬೆಂಗಳೂರು ಜಿಲ್ಲೆ

930 ಶ್ರೀ ಅನಂತನಾಗ ಗುಪ್ತ
S/o ಶ್ರೀ ನಾಗರಾಜಸೆಟ್ಟಿ
ಪ್ರೊ: ನಾಗರಾಜ ಜ್ಯೂಯಲರಿ
ಮಾರ್ಟ್, ಶಿವರಾಂ ಪೇಟೆ
ಮೈಸೂರು—1

(ಮುಂದುವರಿಯುತ್ತದೆ)

# ಸಿದ್ಧಗಂಗಾ

ಸಂಪುಟ-೧೮ ಸಂಚಿಕೆ-೮ ಆಗಸ್ಟ್, ೧೯೮೨

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

* * *

ಧರ್ಮದೊಳಗೆ ಶಿವಧರ್ಮವೇ
ಧರ್ಮವೆಂದರಿದೆನಾಗಿ
ಧರ್ಮ ಸಾಧ್ಯವಾಯಿತ್ತೆನಗೆ
ಗುರುಲಿಂಗ ಜಂಗಮವ ಪಡೆದೆನಗಾಗಿ
ಅರ್ಥ ಸಾಧ್ಯವಾಯಿತ್ತೆನಗೆ
ಶರಣಸತಿ ಲಿಂಗಪತಿ ಎಂದರಿದೆನಾಗಿ
ಕಾಮ ಸಾಧ್ಯವಾಯಿತ್ತೆನಗೆ
ಮಹಾಪ್ರಸಾದವ ಇಂಬುಕೊಂಡು ಧರಿಸಿದೆನಾಗಿ
ಮೋಕ್ಷ ಸಾಧ್ಯವಾಯಿತ್ತೆನಗೆ
ಇಂತು ಧರ್ಮಾರ್ಥ ಕಾಮ ಮೋಕ್ಷಗಳೆಂಬ
ಚತುರ್ವಿಧ ಫಲವೆನಗಾಯಿತ್ತು
ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ

—ಉರಿಲಿಂಗ ಪೆದ್ದಿಗಳು

# ಈ ಸಂಚಿಕೆಯಲ್ಲಿ



### ಚಂದಾದಾರರಲ್ಲಿ ವಿನಂತಿ

1982 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿ ಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

"ಜಾಣ-ಜಾಣರಿಗೆ ಮೂರು ದಾರಿ ;
ಜಾಣ-ದಡ್ಡರಿಗೆ ಎರಡು ದಾರಿ ;
ದಡ್ಡ-ದಡ್ಡರಿಗೆ ಒಂದೇ ದಾರಿ."

ಒಂದು ದಾರಿಯಲ್ಲಿ ಜಾಣರಿಬ್ಬರು ಪರಸ್ಪರಾಭಿಮುಖಿಗಳಾಗಿ ಬರುತ್ತಿದ್ದರು. ಅದರಲ್ಲಿ ಒಬ್ಬ ಜಾಣ ಎದುರಿಗೆ ಬರುತ್ತಿದ್ದವನನ್ನು ನೋಡಿ ಅವನಿಗೆ ದಾರಿ ಬಿಟ್ಟುಕೊಟ್ಟು ಬದಿಯ ಇನ್ನೊಂದು ರಸ್ತೆಯಲ್ಲಿ ನಡೆದುಹೋದ. ಇನ್ನೊಬ್ಬನೂ ಹಾಗೇ ಮಾಡಿದ. ಅದೇ ರಸ್ತೆಯಲ್ಲಿ ಜಾಣ-ದಡ್ಡರು ಎದುರು-ಬದರು ಬರುತ್ತಿದ್ದರು. ಅವರಲ್ಲಿ ಜಾಣ ಎದುರಿಗೆ ಬರುತ್ತಿರುವ ದಡ್ಡನನ್ನು ನೋಡಿ ಅವನ ಸಹವಾಸ ಬೇಡೆಂದು ತಾನೇ ಸೋತು ಅವನಿಗೆ ದಾರಿ ಬಿಟ್ಟುಕೊಟ್ಟು ಬೇರೆ ದಾರಿಯಲ್ಲಿ ತಾನು ಹೋದ. ಅದೇ ರೀತಿಯಾಗಿ ಎದುರು ಬದರಾಗಿ ಇಬ್ಬರು ದಡ್ಡರು ಬರುತ್ತಿದ್ದರು. ಇಬ್ಬರೂ ಹತ್ತಿರ ಬಂದು ಎದುರಾದಾಗ, ಅವನೇ ದಾರಿಬಿಡಲಿ ಎಂದು ಒಬ್ಬ ; ನಾನೇಕೆ ಬಿಡಲಿ ಅವನೇ ಬೇಕಾದರೆ ಬಿಡಲಿ ಅಂತ ಇನ್ನೊಬ್ಬ. ಹೀಗಾಗಿ ಅವರಿಬ್ಬರ ನಡುವೆ ಮೊದಲು ಬಿರುಸಾದ ಮಾತುಕತೆ-ಜಗಳ-ಕೊನೆಗೆ ಕೈಕೈಮಿಲಾಯಿಸಿ ಕುಸ್ತಿಯೇ ನಡೆಯಿತು. ಬಹುಕಾಲಿಕ ದ್ವೇಷಾಸೂಯೆಗಳೂ ಉಳಿದವು.

ಆದುದರಿಂದ ಲೋಕದಲ್ಲಿ ಜಾಣ-ಜಾಣರಂತೆ ಬಾಳುವುದು ಉತ್ತಮ. ಜಾಣ-ದಡ್ಡರಂತೆ ಬಾಳುವುದು ಮಧ್ಯಮ. ಆದರೆ ದಡ್ಡ-ದಡ್ಡರಂತೆ ಬಾಳುವುದು ಅಧಮ ಮತ್ತು ಅನರ್ಥ.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕ ಮಂಡಲಿ

ಪಂ॥ ಚನ್ನಪ್ಪ ಎರೇಸೀಮೆ

ಪಿ. ಎಸ್ ಚಂದ್ರಶೇಖರಯ್ಯ

ಬಸವರಾಜು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಅಜೀವ ಸದಸ್ಯತ್ವ 151-00 ರೂ

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ಹುತಾತ್ಮರ ಜನ್ಮದಿನದಂದು ನಾಡಿನ ರೈತಭಾಂದವರ ಸಮಾವೇಶ. ರಾಜಧಾನಿಯ ಕಬ್ಬನ್ ತೋಟದ ವನಶ್ರೀಯಡಿಯಲ್ಲಿ ಹಸಿರು ಲಾಂಛನಧಾರಿ ನೇಗಿಲ ಯೋಗಿಯ ನ್ಯಾಯ ಬೇಡಿಕೆ. ಸ್ವರಾಜ್ಯ ಬಂದು ಮೂವತ್ತೈದು ವರ್ಷಗಳಿಂದ ಬಾಗಿದ್ದ ಬಡರೈತನ ಬೆನ್ನುಮೂಳೆ ಇದೀಗ ಸೆಟೆದು ನಿಂತಿದೆ. ಬಾಗಿದ ಬೆನ್ನುಮೂಳೆಗೆ ಆಸರೆ ಕೊಡುವ ಬದಲು ಬಗ್ಗಿದ ಬೆನ್ನಿಗೆ ಬಾರುಕೋಲು. ಆರಿಸಿ ಬರುವಾಗ ಕೊಡುವ ಭರವಸೆಗಳು ರೈತನ ಪಾಲಿಗೆ ಮೊಸಳೆ ಕಣ್ಣೀರು. ಅನಂತರ ಅವರ ಬೇಷಾರಾಮ ಜೀವನ ನಿಜಕ್ಕೂ ಅವರಿಗೆ ಅಸಹ್ಯ ತರದಿರುವುದು ಸನಾತನ ಧರ್ಮ ಪರಂಪರೆವುಳ್ಳ ನಮ್ಮ ನಾಡಿನ ದೌರ್ಭಾಗ್ಯ. ಭೂತಾಯ ಹುಡಿಯ ಮಡಿಯಲ್ಲಿ ಹೊರಳಾಡುವವನ ಕಣ್ಣೀರು, ಪಂಚತಾರಾ ಹೋಟೆಲುಗಳಲ್ಲಿ ತೇಲಾಡುವ ಅಮಲಿನವರಿಗೆಲ್ಲಿ ಅರಿವಾಗಬೇಕು. ಅರಿವು ಮೂಡಿಸಲು ಎಚ್ಚೆತ್ತ ರೈತ ಸಮುದಾಯದ ಎಚ್ಚರಿಕೆಯ ಒಕ್ಕೊರಲ ಧ್ವನಿ ಅರಿವು ಮೂಡಿಸದಿರದು. "ಹಸಿರು ರುಮಾಲಿಗೆ ರಕ್ತದ ಕೆಂಪು ಹತ್ತಲು ಬಿಡುವುದಿಲ್ಲ. ಇದುವರೆವಿಗೂ ಬೇಡಿದ್ದಾಯಿತು. ಇನ್ನು ಬೇಡೆವು, ಬೆಂಗಳೂರಿಗೆ ಬಾರೆವು ನಮಗೆ ನ್ಯಾಯ ಸಿಗುವವರೆಗೂ ಇದ್ದಲ್ಲಿಯೇ ಹೋರಾಟ ನಡೆಸುತ್ತೇವೆ" ಈ ರೀತಿಯಾಗಬಾರದು. ಆಡಳಿತ ಪಕ್ಷ ರೈತರ ಸಂಕಟವನ್ನು ಬೇಡಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸಬೇಕಾಗಿತ್ತು. ಆಗಲಿಲ್ಲ, ಈಗ ಆದು ಆಗಬೇಕಾಗಿದೆ. ಅನ್ನ ಬೇಡಿದರೆ ಗುಂಡು ಹಾರಿಸುವ ಕಾಲ ಒಂದಿತ್ತು. ಮರುಕಳಿಸಬಾರದು. ರೈತರ ಎಲ್ಲ ವಿಧ ಬೇಡಿಕೆಗಳನ್ನು ಈಡೇರಿಸುವುದು ನಮ್ಮ ಸರಕಾರದ ಆದ್ಯ ಕರ್ತವ್ಯ. ಇಂದು ರೈತನ ಸ್ಥಿತಿ ಚಿಂತಾಜನಕವಾಗಿದೆ. ಅನ್ನ ದುಡಿಯುವವನಿಗೆ ಅನ್ನವಿಲ್ಲದಂತಾಗಿದೆ. ರೈತ ಸಮಸ್ಯೆಯ ಸುಳಿಗೆ ಸಿಕ್ಕಿ ವಿಲವಿಲನೆ ಹೊದ್ದಾಡುತ್ತಿದ್ದಾನೆ. ಚೌಧರಿ ಚರಣಸಿಂಹರ ಮಾತು ಇಲ್ಲಿ ಮಾನನೀಯ. "ಸರಕಾರಿ ಕಛೇರಿಯ ಚಪ್ರಾಸಿಗಿಂತಲೂ ರೈತನ ಸ್ಥಿತಿ ಹೀನಾಯವಾಗಿದೆ". ಆತ ಶೋಷಿತನಾಗಿದ್ದಾನೆ. ಗರೀಬಿ ಹಠಾವೋ ಸರಕಾರದಲ್ಲಿ ಗರೀಬರಲ್ಲಿ ಗರೀಬನಾಗಿ ಉಳಿದಿದ್ದಾನೆ. ಇನ್ನೆಂದಿಗೆ ಬಡವ ನೆಮ್ಮದಿಯಿಂದ ಉಸಿರಾಡುವ ಕಾಲ ಬರುವುದೋ !. ನಮ್ಮ ಸ್ವರಾಜ್ಯಕ್ಕೆ ಅರ್ಥೈಸುತ್ತಾ ಮಹಾತ್ಮಾಜಿಯವರು ನಮ್ಮ ನಾಡಿನ ಜನತೆಗೆ ಎರಡ್ಹೊತ್ತಿನ ಊಟ ದೊರೆತಾಗ ಮಾತ್ರ ನಾವು ಸ್ವಾತಂತ್ರ್ಯ ಪಡೆದದ್ದಕ್ಕೆ ಸಾರ್ಥಕವೆಂದಿದ್ದಾರೆ. ಆದ್ದರಿಂದ ರೈತ ಸಮುದಾಯಕ್ಕೆ ನ್ಯಾಯ ಸಲ್ಲಬೇಕು. ನ್ಯಾಯ ದೊರಕಿಸಿ ಕೊಡದ ಎಲ್ಲ ವಿಧ ಯೋಜನೆ ವ್ಯವಸ್ಥೆಗಳು ಅಸ್ತಿತ್ವವನ್ನು ಪಡೆಯಲಾರವು.

# ನವನೀತ

ಏಕ ಏವ ಸುಹೃದ್ಧರ್ಮೋ ನಿಧನೇsಪ್ಯನುಯಾತಿ ಯಃ ।
ಶರೀರೇಣ ಸಮಂ ನಾಶಂ ಸರ್ವಮನ್ಯದ್ಧಿ ಗಚ್ಛತಿ ॥

—ಮನುಸ್ಮೃತಿ

ಧರ್ಮ ಒಂದೇ ನಿಜವಾದ ಮಿತ್ರ. ಸಾವಿನಲ್ಲಿಯೂ ಸಹ ಜೊತೆಯಲ್ಲಿರುತ್ತದೆ. ಉಳಿದ ಎಲ್ಲವೂ ಶರೀರದೊಡನೆಯೇ ನಾಶವಾಗುತ್ತವೆ.



ಮಾರ್ಜಾಲಭಕ್ಷಿತೇ ದುಃಖಂ ಯಾದೃಶಂ ಗೃಹಕುಕ್ಕುಟೇ ।
ನ ತಾದೃಜ್ ಮಮತಾಶೂನ್ಯೇ ಕಲವಿಂಕೇsಥ ಮೂಷಕೇ ॥

—ಪ್ರಬೋಧ ಚಂದ್ರೋದಯ

ಮನೆಯ ಕೋಳಿಯನ್ನು ಬೆಕ್ಕು ತಿಂದಾಗ, ಎಷ್ಟು ದುಃಖವಾಗುತ್ತದೆಯೋ ಅಷ್ಟು ದುಃಖ ಗುಬ್ಬಿಯನ್ನೋ ಇಲಿಯನ್ನೋ ಬೆಕ್ಕು ತಿಂದಾಗ ಜನರಿಗೆ ಆಗುವುದಿಲ್ಲ. ಮಮತೆಯಿಲ್ಲದಿರುವುದೇ ಅದಕ್ಕೆ ಕಾರಣ.



ಅತಿರೂಪಾದ್ ಹೃತಾ ಸೀತಾತಿಗರ್ವಾದ್ರಾವಣೋ ಹತಃ ।
ಅತಿದಾನಾದ್ ಬಲಿರ್ಬದ್ಧಃ ಅತಿ ಸರ್ವತ್ರ ವರ್ಜಯೇತ್ ॥

—ಸಮಯೋಚಿತ ಪದ್ಯ ಮಾಲಿಕಾ

ಅತಿಯಾದ ಸೌಂದರ್ಯವಿದ್ದುದರಿಂದ ಸೀತೆ ಅಪಹೃತಳಾದಳು. ಅತಿಗರ್ವದಿಂದ ರಾವಣನು ಹತನಾದನು. ಅತಿ ದಾನದಿಂದ ಬಲಿಚಕ್ರವರ್ತಿ ಬಂಧನಕ್ಕೊಳಗಾದನು. ಆದ್ದರಿಂದ ಎಲ್ಲ ವಿಷಯದಲ್ಲಿಯೂ ‘ಅತಿ’ ಮಾಡಬಾರದು.



# “ಸಿದ್ಧಗಂಗಾ ಶ್ರೀ”

—ಎಸ್. ಬಸವಾರಾಧ್ಯ

ಕರ್ನಾಟಕದ ಗುರುಪೀಠಗಳಲ್ಲಿ ಅತ್ಯಂತ ವಿಖ್ಯಾತವಾದುದು ಶ್ರೀ ಸಿದ್ಧಗಂಗಾ ಕ್ಷೇತ್ರ. ಸುಮಾರು ಆರೇಳು ನೂರು ವರ್ಷಗಳ ಇತಿಹಾಸವುಳ್ಳ ಈ ಪುಣ್ಯಕ್ಷೇತ್ರ ಆಧ್ಯಾತ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರಗಳಿಗೆ ಮಿಗಿಲಾದ ಸೇವೆಯನ್ನು ಸಲ್ಲಿಸುತ್ತಾ ಬಂದಿದೆ. ಈ ಕ್ಷೇತ್ರದಲ್ಲಿ ವ್ಯಾಸಂಗ ಮಾಡಿದವರು ಲಕ್ಷೋಪಲಕ್ಷ ಮಂದಿ. ಇವರಲ್ಲಿ ಸಹಸ್ರಾರು ಮಂದಿ ರಾಷ್ಟ್ರದ ನಾನಾ ಭಾಗಗಳಲ್ಲಿ ಪ್ರಮುಖ ಸ್ಥಾನಗಳನ್ನು ಆಕ್ರಮಿಸಿಕೊಂಡು ಪ್ರಖ್ಯಾತರಾಗಿದ್ದಾರೆ. ಭವ್ಯ ಪರಂಪರೆಯಿಂದ ಕೂಡಿದ ಈ ಕ್ಷೇತ್ರ ನಿರಂತರವಾಗಿ ಸಹಸ್ರಾರು ಮಂದಿಗೆ ಪ್ರತಿನಿತ್ಯ ದಾಸೋಹವನ್ನು ನಡೆಸುತ್ತಿರುವುದು ಸರ್ವವಿದಿತವಾಗಿದೆ.

ಪ್ರಸ್ತುತ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಡಾ॥ ಶ್ರೀ ಶಿವಕುಮಾರಸ್ವಾಮಿಗಳು ಈ ಮಹಾ ಕ್ಷೇತ್ರದ ಅಧ್ಯಕ್ಷರಾಗಿದ್ದಾರೆ. ಅಪಾರವಾದ ಆಧ್ಯಾತ್ಮಿಕ ಜ್ಞಾನ ಸಂಪತ್ತಿನಿಂದ ಪರಿಪೂರ್ಣರಾದ ಶ್ರೀಗಳವರು ಎಲ್ಲವರ್ಗದ ಜನರಿಂದಲೂ ಪರಿಕೀರ್ತಿತರಾಗಿದ್ದಾರೆ. ವಿಶೇಷ ಗೌರವಾದರಗಳನ್ನು ಪೂಜ್ಯ ಭಾವನೆಯನ್ನೂ ಪಡೆದುಕೊಂಡಿದ್ದಾರೆ. ಶ್ರೀಗಳವರ ದರ್ಶನ ಶ್ರೀ ಕ್ಷೇತ್ರದ ಸ್ಪರ್ಶನ ಮುಕ್ತಿದಾಯಕವೆಂದು ಜನತೆ ಗಾಢವಾಗಿ ನಂಬಿದೆ. ಶ್ರೀಗಳವರು ಈ ಮಹಾ ಕ್ಷೇತ್ರದ ಅಧ್ಯಕ್ಷರಾಗಿ 50 ವರ್ಷಗಳು ಸಂದ ಸಂದರ್ಭದ ಸವಿನೆನಪಿಗಾಗಿ ಸುವರ್ಣ ಮಹೋತ್ಸವ ಸಂಚಿಕೆ “ಸಿದ್ಧಗಂಗಾ ಶ್ರೀ” ಯನ್ನು ಹೊರತರಲಾಗಿದೆ. ಈ ಬೃಹತ್ ಸಂಪುಟ ಶ್ರೀಗಳವರ ಭವ್ಯ ವ್ಯಕ್ತಿತ್ವಕ್ಕೆ ಸಾಕ್ಷೀಭೂತವಾಗಿದೆ.

“ಸಿದ್ಧಗಂಗಾ ಶ್ರೀ” ಇತರ ಸಂಭಾವನಾ ಗ್ರಂಥಗಳಂತಲ್ಲದೆ ತನ್ನದೇ ಆದ ವೈಶಿಷ್ಟ್ಯವನ್ನು ಪಡೆದಿದೆ. ಈ ಮಹಾನ್ ಕೃತಿಯ ಸಂಪಾದಕರು ನಿಸ್ವಾರ್ಥ–ನಿಷ್ಠೆ ಪ್ರಾಮಾಣಿಕತೆಯಿಂದ ದುಡಿದಿರುವುದು ಈ ಸಂಪುಟದಿಂದ ವ್ಯಕ್ತವಾಗುತ್ತದೆ. ಶ್ರೀಗಳವರಿಗೆ ಅರ್ಪಿತವಾಗಿರುವ ಈ ಗ್ರಂಥ ಒಂದು ಐತಿಹಾಸಿಕ ದಾಖಲೆಯಾಗಿರಬೇಕು. ಸಂಶೋಧಕರಿಗೆ ಒಂದು ಆಕರಗ್ರಂಥವಾಗಿರಬೇಕು. ಸಾಹಿತ್ಯಪ್ರಿಯರಿಗೆ ಒಂದು ಸಂದರ್ಭಗ್ರಂಥವಾಗಿರಬೇಕು ಎಂಬ ಧ್ಯೇಯವನ್ನಿಟ್ಟುಕೊಂಡ ಇದರ ಸಂಪಾದಕರು ಸಂಪೂರ್ಣವಾಗಿ ಸಫಲರಾಗಿದ್ದಾರೆ. ಕ್ಷೇತ್ರಶ್ರೀ, ದರ್ಶನಶ್ರೀ, ಸಾಹಿತ್ಯಶ್ರೀ, ಕಲಾಶ್ರೀ

ಎಂಬ ವಿಭಾಗಗಳಲ್ಲಿ ಶ್ರೀ ಕ್ಷೇತ್ರದ ಇತಿಹಾಸ, ಶ್ರೀಗಳವರ ಜೀವನ ಚರಿತ್ರೆ, ಕ್ಷೇತ್ರದ ಚಟುವಟಿಕೆಗಳು, ಶ್ರೀ ಕ್ಷೇತ್ರದ ವಿದ್ಯಾಸಂಸ್ಥೆಗಳು, ಶ್ರೀಗಳವರ ಭಾಷಣಗಳು ಲೇಖನಗಳು, ವಿಶ್ವದ ಪ್ರಮುಖ ದರ್ಶನಗಳು, ವೀರಶೈವ ಧರ್ಮದ ಬಗೆಗೆ ಅತ್ಯಂತ ಉಪಯುಕ್ತ ಲೇಖನಗಳು, ಸಾಹಿತ್ಯಪ್ರಕಾರಗಳ ದೃಷ್ಟಿಯಿಂದ ವೀರಶೈವ ಸಾಹಿತ್ಯಾವಲೋಕನ, ವೀರಶೈವರು ಲಲಿತ ಕಲೆಗಳಿಗೆ ಸಲ್ಲಿಸಿರುವ ಸೇವೆ –ಇವೇ ಮೊದಲಾದ ವಿಷಯಗಳು ಪ್ರತಿಪಾದಿತವಾಗಿವೆ. 196 ವೈವಿಧ್ಯಪೂರ್ಣವಾದ ಲೇಖನಗಳಿಂದ ವಿರಾಜಿಸುತ್ತಿರುವ ಈ ಸಂಪುಟ 1250 ಪುಟಗಳನ್ನು ಒಳಗೊಂಡಿದೆ. ನಾಡಿನ ಪ್ರಬುದ್ಧ ವಿದ್ವಾಂಸರಿಂದ ರಚಿತವಾದ ಈ ಲೇಖನಗಳು ಬಹುಕಾಲ ತಮ್ಮ ಮೌಲ್ಯವನ್ನು ಉಳಿಸಿಕೊಳ್ಳುವಂತಹುವಾಗಿವೆ. ಒಬ್ಬ ಕನ್ನಡದ ಪ್ರಸಿದ್ಧ ಕವಿ ಹೇಳುವಂತೆ

ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ ಭುವನದ ಭಾಗ್ಯದಿಂದಮಕ್ಕುಂ ನೋಳ್ಪಂ
ಬೆಲೆಗೊಟ್ಟುತಾರ ಮಧುವಂ
ಮಲಯಾನಿಲನಂ ಮನೋಜನಂ ಕೌಮುದಿಯಂ

ಈ ಕೃತಿ ಕೇವಲ ಬೆಲೆಯಿಂದಾದುದಲ್ಲ. ಬೆಲೆಗೆ ನಿಲುಕುವಂತಹುದೂ ಅಲ್ಲ. ಅಮೌಲ್ಯವಾದುದು. ಈ ಸಂಪುಟದ ಅಸಂಖ್ಯಾತ ವರ್ಣಚಿತ್ರಗಳು ಶ್ರೀ ಕ್ಷೇತ್ರದ ಮತ್ತು ಶ್ರೀಗಳವರ ಪ್ರಾತ್ಯಕ್ಷಿಕೆಯಂತಿವೆ. ರಾಷ್ಟ್ರದ ಹಲವಾರು ಉನ್ನತ ಉದಾತ್ತ ವ್ಯಕ್ತಿಗಳಿಂದಲೂ ಶ್ರೀ ಕ್ಷೇತ್ರದ ವಿವಿಧ ಸನ್ನಿವೇಶಗಳಿಂದಲೂ ಕೂಡಿದ ಮನಮೋಹಕ ಛಾಯಾ ಚಿತ್ರಗಳೇ ಶ್ರೀ ಕ್ಷೇತ್ರದ ಇತಿಹಾಸವನ್ನು ನಿರೂಪಿಸುವಂತಿವೆ.

"ಸಿದ್ಧಗಂಗಾ ಶ್ರೀ" ಸಂಪುಟದ ಮುದ್ರಣ ವಿನ್ಯಾಸ ಯಾರನ್ನಾದರೂ ಮೆಚ್ಚಿಸುವಂತಹುದು. ಶ್ರೀ ಕ್ಷೇತ್ರವನ್ನು ಪ್ರವೇಶಿಸಿದಾಗ ಆಗುವ ಅನುಭವವೇ ಸಿದ್ಧಗಂಗಾಶ್ರೀ ಸಂಪುಟವನ್ನು ತೆರೆದಾಗಲೂನಿವಿ ಏವಾದವಾಗಿ ಆಗುತ್ತದೆ. ನಭೂತೋನಭವಿಷ್ಯತಿ ಎಂಬಂತೆ ಪ್ರಕಾಶಿಸುತ್ತಿರುವ ಈ ಸಂಪುಟ ಸಿದ್ಧಗಂಗಾ ಶ್ರೀ ಗಳವರ ಮಣಿದರ್ಪಣದಂತಿದೆ. ಇದರಲ್ಲಿ ತನ್ನನ್ನು ತಾನು ಕಂಡುಕೊಳ್ಳಬಹುದು. ಇತರರನ್ನೂ ಕಾಣಿಸಬಹುದು. ಲೌಕಿಕದ ಜಂಜಾಟದಲ್ಲಿ ತೊಳಲುತ್ತಿರುವವರು ಈ ಗ್ರಂಥದ ಪಠನದಿಂದಲ್ಲದಿದ್ದರೂ, ಕನಿಷ್ಠ ಸ್ಪರ್ಶನದಿಂದಾದರೂ ಪುನೀತರಾಗಬಹುದು. "ಸಿದ್ಧಗಂಗಾಶ್ರೀ" ಸರ್ವರ ಆತ್ಮಶ್ರೀಯನ್ನು ನಿರಂತರವಾಗಿ ಬೆಳಗಿಸುವ ನಂದಾದೀವಿಗೆಯಂತಿದೆ.



# ಮಾರ್ಗಸಾಹಿತ್ಯದ ಮೇಲೆ ವಚನಸಾಹಿತ್ಯದ ಪ್ರಭಾವ

—ಎಸ್. ಬಸವಾರಾಧ್ಯ, ಎಂ.ಎ.

ವಿಪುಲವೂ ವೈವಿಧ್ಯಪೂರ್ಣವೂ ಆದ ಕನ್ನಡ ಸಾಹಿತ್ಯ ಚರಿತ್ರೆ ಅತ್ಯಂತ ಪ್ರಾಚೀನವಾದುದು. ಸುಮಾರು ಎರಡುಸಾವಿರ ವರ್ಷಗಳ ಪ್ರಾಚೀನತೆಯುಳ್ಳ ಈ ಸಾಹಿತ್ಯ ಕಾಲಕಾಲಕ್ಕೆ ಹಲವಾರು ಪ್ರಭಾವಗಳಿಗೆ ಒಳಗಾಗಿರುವುದನ್ನು ಗುರುತಿಸಬಹುದಾಗಿದೆ. ಈ ಅವಸ್ಥಾಂತರಗಳನ್ನು ಲಾಕ್ಷಣಿಕರೂ ಪರಿಗಣಿಸಿದ್ದಾರೆ. ಕನ್ನಡದ ಪ್ರಥಮ ಲಾಕ್ಷಣಿಕನಾದ ನೃಪತುಂಗ ತನ್ನ ಕವಿರಾಜಮಾರ್ಗದಲ್ಲಿ ಉತ್ತರ ದಕ್ಷಿಣ ಮಾರ್ಗಗಳನ್ನು ವಿವೇಚಿಸಿದ್ದಾನೆ. ಈತನಾದಮೇಲೆ ಬಂದ ನಾಗವರ್ಮ ಭಟ್ಟಾಕಳಂಕರೂ ನೃಪತುಂಗನ ಅಭಿಪ್ರಾಯವನ್ನು ಪುಷ್ಟೀಕರಿಸಿದ್ದಾರೆ. ಈಚಿನ ಕೆಲವು ವಿದ್ವಾಂಸರು ಈ ಮಾರ್ಗ ಭೇದಗಳಿಗೆ ತಮಿಳು ತೆಲುಗು ಭಾಷೆಗಳ ಗಾಢ ಸಂಪರ್ಕವೇ ಕಾರಣವೆಂದು ಅಭಿಪ್ರಾಯಪಟ್ಟಿದ್ದಾರೆ. ಈ ವಿಷಯ ಎಂತಾದರೂ ಇರಲಿ, ಪ್ರಕೃತ ಮಾರ್ಗಸಾಹಿತ್ಯವಾವುದು ಎಂಬುದನ್ನು ವಿವೇಚಿಸಬೇಕಾಗಿದೆ.

ಮಾರ್ಗಸಾಹಿತ್ಯ ಎಂಬ ಹೆಸರಿನಲ್ಲಿ ಯಾವೊಂದು ವಿವೇಚನಾಯುತವಾದ ಲೇಖನವೂ ಕಂಡುಬಂದಿಲ್ಲ. ಇದರ ಉಲ್ಲೇಖವಾಗಲೀ ರೂಪರೇಷೆಗಳಾಗಲಿ ಪ್ರಸ್ತಾಪಿಸಲ್ಪಟ್ಟಿಲ್ಲ. ಆದರೆ ಕನ್ನಡಸಾಹಿತ್ಯದಲ್ಲಿ ಮಾರ್ಗ, ದೇಶಿ ಎಂಬ ಎರಡು ಪ್ರಭೇದಗಳಿರುವುದೂ ಇವುಗಳ ಪ್ರಸ್ತಾಪವೂ ಅಭಿವ್ಯಕ್ತವಾಗಿದೆ. ಹಾಗೆಯೇ ವಸ್ತುಕ ವರ್ಣಕಗಳನ್ನು ವಿದ್ವಾಂಸರು ವಿಮರ್ಶಿಸಿದ್ದಾರೆ. ಚಂಪೂಮಾರ್ಗದ ವಿಶ್ಲೇಷಣೆಯನ್ನು ಮಾಡಿದ್ದಾರೆ. ಮಾರ್ಗ ಎಂದರೆ ರೀತಿ, ಶೈಲಿ (Diction style) ಎಂದು ನಿಘಂಟುಕಾರರು ಹೇಳಿದ್ದಾರೆ. ಪ್ರಾಚೀನ ಚಂಪೂ ವಸ್ತುಕ ಇವನ್ನೆ ಮಾರ್ಗಸಾಹಿತ್ಯದ ಕಕ್ಷೆಯೊಳಗೆ ತರಲಾಗಿದೆ, ಆದ್ದರಿಂದ ಮಾರ್ಗಸಾಹಿತ್ಯ ಎಂದರೆ ಚಂಪೂಸಾಹಿತ್ಯ ಎಂದು ಪರಿಭಾವಿಸಬೇಕಾಗಿದೆ.

ಕನ್ನಡಸಾಹಿತ್ಯದಲ್ಲಿ ಚಂಪೂ ಅಥವಾ ಮಾರ್ಗಸಾಹಿತ್ಯ ತನ್ನದೇ ಆದ ವಿಲಾಸವನ್ನೂ ವೈಭವವನ್ನೂ ಮೆರೆದಿದೆ. ರಾಜರ ಆಸ್ಥಾನ ಪಂಡಿತ ಮಂಡಲಿಗಳಲ್ಲಿ ಮಾನ್ಯತೆಯನ್ನು ಪಡೆದಿದೆ. ವಚನಸಾಹಿತ್ಯಕ್ಕಿಂತ ಹಿಂದೆ ಈ ಚಂಪೂಸಾಹಿತ್ಯ ಬಹುಮಟ್ಟಿಗೆ ಜೈನಕವಿಗಳಿಂದಲೇ ರಚಿತವಾಗಿದ್ದುದು ವೇದ್ಯವಾಗಿದೆ. ಆಶ್ರಯದಾತ ರಾಜರ ಪ್ರೀತ್ಯರ್ಥವಾಗಿ ಪ್ರತಿಭಾವಂತರಾದ ಕನ್ನಡ ಕವಿಗಳು ತಮ್ಮ ಪಾಂಡಿತ್ಯವನ್ನು ವಿನಿಯೋಗಿಸಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಮೈತಾಳಿದ ವಚನ

1. ಕವಿರಾಜಮಾರ್ಗ ೨-೫೧-೬೩

ಸಾಹಿತ್ಯ ಕ್ರಾಂತಿಕಾರಕ ಬದಲಾವಣೆಗಳನ್ನುಂಟುಮಾಡಿತು. ನೂತನ ವಿಚಾರಧಾರೆಯನ್ನು ಹರಿಸಿತು. ಸಾಹಿತ್ಯದಲ್ಲಿ ಒಂದು ನವೋದಯವನ್ನುಂಟುಮಾಡಿತು. ಜಡ್ಡು ಹಿಡಿದ ಪ್ರಾಚೀನ ರೀತಿ ನೀತಿ ಸಂಪ್ರದಾಯಗಳನ್ನು ಮೂಲೋತ್ಪಾಟನ ಮಾಡಿತು. ಕೆಲವನ್ನು ಸಂಸ್ಕರಿಸಿ ಪರಿಷ್ಕರಿಸಿತು. ಈ ವಚನಸಾಹಿತ್ಯ ಕಥಾವಸ್ತು, ಸಾಮಾಜಿಕ ಜೀವನ, ಭಾಷೆ, ನಿರೂಪಣಾವಿಧಾನ; ರೀತಿ ಇವೇಮೊದಲಾದ ಅಂಶಗಳಲ್ಲಿ ತನ್ನದೇ ಆದ ಒಂದು ಪ್ರಕಾರವನ್ನು ಸೃಷ್ಟಿಸಿತು. ಈ ವಚನಸಾಹಿತ್ಯದ ಪ್ರಭಾವ ತರುವಾಯದ ಕಾವ್ಯಗಳ ಮೇಲೆ ವಿಶೇಷವಾಗಿ ಉಂಟಾಯಿತು. ವಚನಸಾಹಿತ್ಯದ ಪೂರ್ವ ಮತ್ತು ತರುವಾಯದ ಕನ್ನಡಸಾಹಿತ್ಯ ಚರಿತ್ರೆಯನ್ನು ಪರಿಶೀಲಿಸಿದರೆ ಈ ಅಂಶಗಳು ಮತ್ತಷ್ಟು ಸ್ಪಷ್ಟವಾಗುತ್ತವೆ.

ವಚನಸಾಹಿತ್ಯದ ಪ್ರಭಾವ ವಿಶೇಷವಾಗಿ ಆಗಿರುವುದು ವೀರಶೈವ ಚಂಪೂ ಕಾವ್ಯಗಳ ಮೇಲೆ ಎಂಬುದನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು. ಇದು ಎಷ್ಟರ ಮಟ್ಟಿಗೆ ಆಗಿದೆ ಎಂಬುದನ್ನು ಸ್ಥೂಲವಾಗಿ ವಿವೇಚಿಸುವುದಕ್ಕೆ ಯತ್ನಿಸಲಾಗಿದೆ.

ವೀರಶೈವ ಮಾರ್ಗ ಸಾಹಿತ್ಯಕಾರರಲ್ಲಿ ಹರಿಹರನೇ ಮೊದಲಿಗ. ಕನ್ನಡ ಸಾಹಿತ್ಯಕ್ಕೆ ಒಂದು ನೂತನ ಆಯಾಮವನ್ನು ತೆರೆದವನು ಹರಿಹರ. ಕ್ರಾಂತಿಕಾರಕ ಕವಿಯಾದ ಹರಿಹರ ನೂತನ ಸಂಪ್ರದಾಯ ಪ್ರವರ್ತಕ. ಪರಂಪರಾಗತವಾದ ಪದ್ಧತಿಯನ್ನು ಬದಿಗಿರಿಸಿ ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ ಕಾವ್ಯ ರಚಿಸಿ ಕೆಡಬಾರದೆಂದು ಕವಿಗಳಿಗೆ ಹಿತೋಕ್ತಿಯನ್ನು ನೀಡಿದ್ದಾನೆ. ತನ್ನ ಕಾವ್ಯಗಳಲ್ಲಿ ಈ ನಿಷ್ಠೆಯನ್ನೇ ಮೆರೆದಿದ್ದಾನೆ.

ಹರಿಹರ ವಚನಕಾರರಿಗೆ ತೀರ ಸಮೀಪವರ್ತಿಯಾಗಿದ್ದ. ವಚನಸಾಹಿತ್ಯದ ಪ್ರಭಾವ ಎಲ್ಲ ಪ್ರಕಾರಗಳಲ್ಲೂ ಈತನ ಕೃತಿಗಳ ಮೇಲಾಗಿರುವುದನ್ನು ನೋಡಬಹುದು. ಈತನ ರಗಳೆ ಇದಕ್ಕೆ ಜೀವಂತ ನಿದರ್ಶನದಂತಿವೆ. ಈತನ ಏಕೈಕ ಚಂಪೂಕೃತಿ ಗಿರಿಜಾಕಲ್ಯಾಣ. ಈ ಚಂಪೂಕಾವ್ಯದ ಮೇಲೆ ವಚನಸಾಹಿತ್ಯದ ಪ್ರಭಾವ ಎಷ್ಟರಮಟ್ಟಿಗೆ ಆಗಿದೆ ಎಂಬುದನ್ನು ಕಾವ್ಯಪರಿಶೀಲನದಿಂದ ಸ್ಪಷ್ಟವಾಗುತ್ತದೆ. ಉದಾಹರಣೆಗೆ ಒಂದೆರಡು ಪದ್ಯಗಳನ್ನು ಪರಿಶೀಲಿಸಬಹುದು.

**ಗಿರಿಜೆಯ ಪೂಜಾ ವಿಧಾನ :**

ಎಲ್ಲಿ ಸರೋಜಮೆಲ್ಲಿ ವಿಮಳೋತ್ಪಲಮೆಲ್ಲಿ ಲತಾವಿತಾನದೊ
ಪ್ಪೆಲ್ಲಿ ವನಂಗಳೆಲ್ಲಿ ಕೃತಾಕಚಳಮೆಲ್ಲಿ ವಿಶಾಲಮಪ್ಪ ತ



ಣ್ಪೆಲ್ಲಿ ತಟಾಕಮೆಲ್ಲಿ ಪುಳಿನಸ್ಥಳಮೆಲ್ಲಿ ನದೀನದಾಳಿ ತಾ
ನಲ್ಲಿ ಭವಾನಿ ಭಕ್ತಿಮಿಗೆ ಭಾವಿಸಿ ಭರ್ಗವನನೊಲ್ದು ಪೂಜಿಪಳ್[2]

**ಮನ್ಮಥ ಶಿವನನ್ನು ವರ್ಣಿಸಿದ್ದು :**

ಶ್ರುತಿಗಳ್ ಕಾಣದ ಮನುಗಳ
ಮತಿಯೆಯ್ದದ ಮುನಿಗಳಱಿವು ನಿಲ್ಕದ ಶಾಸ್ತ್ರ
ಪ್ರತತಿ ನೆಱೆಯೆಱಿಯದಪ್ರತಿ
ಹತರೂಪನನೆಂತು ಕಾಣ್ಬೆನೆಂತಾನೆಸುವೆಂ[3]

**ರತಿಯ ಪ್ರಲಾಪ :**

ಮೊಱೆಯೋ ಮೊಱೆಯೋ ಶಿವಧೋ
ಕಱೆಗೊರಲನ ಕಣ್ಣದಾಳಿ ಕುಸುಮಾಯುಧನಂ
ನೆಱೆ ಮುತ್ತಿತ್ತಯ್ಯೋ ಇದ
ನಱಿವವರಿಲ್ಲಕ್ಕಟಾ! ಕೃಪಾಳುಗಳಿಲ್ಲಾ![4]
ನೆಲನೇ ನಭವೇ ಶಿಖಿಯೇ
ಜಲವೇ ರವಿಯೇ ಶಶಾಂಕನೇ ಮಾರುತನೇ
ಬಲವಳಿದವಳನನಾಥೆಯ
ನಲಘುತರಾ ಘೋಷೆಯಂ ನಿರೀಕ್ಷಿಸಿರೆನ್ನಂ[5]
ವನದೇವತೆಯರಿರಾ ನಂ
ದನ ದೇವತೆಯರಿರ ದೆಶೆಯ ದೇವತೆಯರಿರಾ
ಘನಪಾಪಂ ಪುದಿದಿರ್ದೀ
ವನಿತೆಯನೊಳಕೊಳ್ಳಿರೇ ಅನಾಥೆಯನೆನ್ನಂ[6]

ಈ ಮೇಲಿನ ಪದ್ಯಗಳು ವಚನಸಾಹಿತ್ಯದ ಪ್ರಭಾವ ನಿಚ್ಚಳವಾಗಿ ಆಗಿರುವುದನ್ನು ಸಾರುತ್ತಿವೆ. ಹರಿಹರನ ಎಲ್ಲ ಕಾವ್ಯಗಳ ಮೇಲೂ ವಚನ ಸಾಹಿತ್ಯ ವಿಶೇಷ ಪ್ರಭಾವನ್ನು ಬೀರಿದೆ.

ಹರಿಹರನ ಮಾರ್ಗದಲ್ಲೇ ಮುಂದುವರಿದ ಮತ್ತೊಬ್ಬ ಕವಿ ಸುರಂಗ. ಹದಿನಾರನೆಯ ಶತಮಾನದಲ್ಲಿದ್ದ. ಈತ ಕರ್ನಾಟಕ ಕವಿಚಕ್ರವರ್ತಿ ಎಂಬ ಬಿರುದಿಗೂ ಪಾತ್ರನಾಗಿದ್ದಂತೆ ತಿಳಿದುಬರುತ್ತದೆ. ಹರಿಹರನಂತೆಯೇ ಈತನೂ "ಮನುಜಸ್ತುತಿಯಂ ಬಿಟ್ಟು ಸುರಂಗ ಕವಿ ನಾಲಗೆಯಂ ಗಿರಿಶಂಗೆ ಮಾಱಿದಂ" ಎಂದು ಹೇಳಿ

---

2. ಗಿರಿಜಾಕಲ್ಯಾಣ ೩-೯೨   3. ಅದೇ ೭-೨೮   4. ಅದೇ ೮-೭೫   5. ಅದೇ ೮-೭೬
6. ಅದೇ ೮-೭೭

ಕೊಂಡಿದ್ದಾನೆ. ಈತನ ತ್ರಿಷಷ್ಟಿಪುರಾತನ ಚಾರಿತ್ರದಲ್ಲಿ ಅರವತ್ತುಮೂವರು ಶಿವ ಶರಣರ ಚರಿತೆ ವರ್ಣಿತವಾಗಿದೆ. ಸುರಂಗ ತನ್ನ ಕಾವ್ಯದ ಆದಿಯಲ್ಲಿ ತನ್ನ ಕವಿತಾ ಧೋರಣೆಯನ್ನು ಈರೀತಿ ನಿರೂಪಿಸಿದ್ದಾರೆ.

ಕ್ಷಿತಿಯೆಲ್ಲಂ ಪೊಗಳ್ವಂತಿರೈಹಿಕದ ನಾನಾಭೋಗಮಂ ಮತ್ತಮು
ನ್ನತ ಪಾರತ್ರಿಕ ಸೌಖ್ಯದೇಳ್ಗೆಯನನೂನಂ ಮಾಳ್ಪ ಕಾತ್ಯಾಯನೀ
ಪತಿಯಂ ಸನ್ಮತಿಯಾದುದರ್ಕೆ ಕವಿ ನೀಂ ಬೇಗಂ ಪೊಗಳ್ ಮಾನವ
ಸ್ತುತಿಗಂಗೈಸದಿರಲ್ಪಕಾರ್ಯಮದಟ್ಟಿಂ ಪಾಲುಂಡು ಮೇಲುಂಬುದೇ,[7]

ವಚನಸಾಹಿತ್ಯದ ಪ್ರಭಾವ ಸುರಂಗನ ಮೇಲೂ ಸಾಕಷ್ಟು ಆಗಿರುವುದಕ್ಕೆ ನಿದರ್ಶನಗಳಿವೆ. ಕಥಾವಸ್ತು ಭಾಷೆ ಇವೇ ಮೊದಲಾದ ದೃಷ್ಟಿಗಳಿಂದ ಈ ಕಾವ್ಯವನ್ನು ಪರಿಶೀಲಿಸಬಹುದು. ಈತನ ಕಾವ್ಯದಲ್ಲಿ ರಗಳೆಯನ್ನು ಹಲವಾರೆಡೆ ಬಳಸಲಾಗಿದೆ. ಉದಾಹರಣೆಗಾಗಿ ಒಂದೆರಡು ಪ್ರಕರಣಗಳನ್ನು ಆರಿಸಿಕೊಳ್ಳಲಾಗಿದೆ.

**ಚೇರಮನ ಕಥೆಯಲ್ಲಿ ಬರುವ :**

ಜಯ ಗಿರಿಜಾನಯನಾನಂದನ ಜಯ
ಜಯ ಚರಣಾನತ ಸಂಕ್ರಂದನ ಜಯ
ಜಯ ರಜತಾಚಳ ಶಿಖರಾಲಯ ಜಯ
ಜಯ ಸಚರಾಚರ ಜಗದಾಶ್ರಯ ಜಯ[8]

**ಪಗಲ್ವೋಳನ ಕಥೆಯಲ್ಲಿ ಬರುವ :**

ಕಾರ್ಮುಕದ ಶಿಕ್ಷೆಗಳಿನೊರ್ಮೆ ಹಯಶಿಕ್ಷೆಗಳಿನೊರ್ಮೆಯಸಿ ಶಿಕ್ಷಣದ ಛಿನ್ನಣದ ಚೆಲ್ವಿಂ
ದೊರ್ಮೆ ಗಜಶಿಕ್ಷೆಗಳಿನೊರ್ಮೆ ಮೃಗಯಾಶ್ರಮದಿನೊರ್ಮೆ ವರವೀಣೆಗಳ ಬಾಜನೆಯ ಚೆಲ್ವಿಂ
ದೊರ್ಮೆ ವನಿತಾಸುಖದಿನೊರ್ಮೆ ಕಥೆಗೇಳ್ವ ದಟ್ಟಿನೊರ್ಮೆ ವರನಾಟಕ ವಿನೋದರಸ ದೊಳ್ಪಿಂ
ದೊರ್ಮೆ ಜಲಕೇಳಿಗಳಿನೊರ್ಮೆ ಮುನಿಸೇವೆಗಳಿನೊರ್ಮೆ ನೆಱೆಪೊಳ್ತುಗಳೆವಂ ಧರಣಿಪಾಳಂ[9]

**ಕಲಿಕಂಭ ಮಾಹೇಶ್ವರರ ಚರಿತ್ರೆಯಲ್ಲಿ ಬರುವ :**

ಪುರುಷಂ ಮುಟ್ಟೆ ಸುವರ್ಣವಾದ ಬಳಿಕಂ ಕಾರ್ಬೊನ್ನದೆಂದೆಂಬರೇ
ಹರನಂ ನಾಳ್ದುರುಭಕ್ತರೊಳ್ ಕುಲಮುಮಂ ಶ್ರೀಯಂ ವಿಚಾರಿಪ್ಪುದೇ

7. ತ್ರಿಷಷ್ಟಿಪುರಾತನಚಾರಿತ್ರಂ ೧-೨೮ 8. ಅದೇ ೧-೨೮ 9. ಅದೇ ೧೭-೫೬



ಸಿದ್ಧಗಂಗಾ

ವರಶೈವಾಗಮ ಕೋವಿದರ್ ನಿರತಮೆಂದಂದಾಗಳಾಬೋಪದಿಂ
ಕರಿಕಂಭಂ ಸರಿ ಜಂಗಮಕ್ಕೆಱಗಳೆಂದುದ್ರೇಕಮಂ ತಾಳ್ದಿದಂ[10]

ಈ ಮೇಲಿನ ಕಾವ್ಯಭಾಗಗಳು ವಚನಸಾಹಿತ್ಯದ ಪ್ರಭಾವವನ್ನು ನಿರೂಪಿಸುವಂತಿವೆ.

ಹದಿನಾರನೆಯ ಶತಮಾನದ ವೀರಭದ್ರರಾಜನೂ ಸಹ ಇದೇ ಕಕ್ಷೆಗೆ ಒಳಪಡುತ್ತಾನೆ. ರಾಜವಂಶಕ್ಕೆ ಸೇರಿದ ಈತನು ಪರ್ಣನಾಪ್ರದವಾದ ತನ್ನ ವೀರಭದ್ರ ವಿಜಯದಲ್ಲಿ :

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹಮೊಲ್ದು ಪು
ಟ್ಟಿದ ತಳಮಿಂತಿದೆಯ್ದೆ ವಿವಿಧಶ್ರುತಿ ಸಂಚಯ ಜನ್ಮಭೂಮಿತಾ
ನಿದು ಪರಮಾರ್ಥಸಾರವಿದು ನೋಡೆ ಪುರಾಣ ವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆಱೆದಿರ್ಪುದು ಭೂತಳಾಗ್ರದೊಳ್

ಹೀಗೆ ಹೇಳಿಕೊಂಡಿದ್ದಾನೆ. ಈತನೂ ಹರಿಹರನ ಪಂಥವನ್ನೇ ಅನುಸರಿಸಿದ್ದಾನೆ.[11]

**ವೀರಭದ್ರವಿಜಯದ ದ್ವಿತೀಯಾಶ್ವಾಸದಲ್ಲಿ ಬರುವ :**

ಶಿಲೆಯೆಲ್ಲಂ ಲಿಂಗಂಗಳ್
ನೆಲಸಿದ ಮಾನವರ್ಗಳೆಲ್ಲಮುಭವಗಣಂಗಳ್
ಜಲಮೆಲ್ಲಂ ತೀರ್ಥಂಗಳ್
ಸುಲಲಿತ ಮಾಗಿಂತು ಕಾಶಿ ಕಂಗೊಳಿಸಿರ್ಕುಂ ॥ ೩ ॥

**ಪಂಚಮಾಶ್ವಾಸದಲ್ಲಿ ಬರುವ ರಗಳೆ :**

ಶ್ರೀ ಗಿರಿಜಾಸ್ಯಾಂಬುಧಿನಕರ ಜಯ
ಸಾಗರಶಯನ ವಿನುತ ಶಂಕರ ಜಯ
ದೇವ ಚತುರ್ದಶಭುವನನಾಥ ಜಯ
ದೇವ ಧರಿತ್ರೀ ತಳವರೂಥ ಜಯ

**ಸಪ್ತಮಾಶ್ವಾಸದಲ್ಲಿ ಬರುವ :**

ವೇದಂಗಳಱಸಿ ಕಾಣದ
ಮಾದೇವರ ಮಾನಸಕರಗೋಚರದನ್ನೆನಿಸಿ

10. ತ್ರಿಷಷ್ಟಿಪುರಾತನ ಚಾರಿತ್ರಂ ೪೩-೯ 11. ವೀರಭದ್ರವಿಜಯಂ ೧-೬೯

ಘ್ರಾದಿ ಮಧ್ಯಾಂತಶೂನ್ಯಮು
ಹಾದೇವನ್ನೊಳ್ಳಂಕವೇ ಶಿವಾಯೆಂದುಸಿರ್ದಳ್ || ೭೭ ||

**ದ್ವಾದಶಾಶ್ವಾಸದಲ್ಲಿ ಬರುವ :**

ಇದು ಸಕಲಾಗಮಂಗಳ ತವರ್ಮನೆ ಶಾಸ್ತ್ರಸಮೂಹಮೊಲ್ದು ಪು
ಟ್ಟಿದ ತಳಮಂತಿದೆಯ್ದೆ ವಿವಿಧ ಶ್ರುತಿಸಂಚಯ ಜನ್ಮಭೂಮಿ ತಾ
ನಿದು ಪರಮಾರ್ಥಸಾರಮಿದು ನೋಡೆ ಪುರಾಣವಿಚಾರದೇಳ್ಗೆಯಿಂ
ತಿದೆನಿಸಿ ವೀರಭದ್ರವಿಜಯಂ ಮೆಱೆದಿರ್ಪುದು ಭೂತಳಾಗ್ರದೊಳ್ ||೧೪||

ಈ ಮೇಲಿನ ಪದ್ಯಗಳು ವಚನ ಸಾಹಿತ್ಯದ ಸಾರವನ್ನೂ ಪ್ರಭಾವವನ್ನೂ ಒಳಕೊಂಡಂತಿರುವುದನ್ನು ಗಮನಿಸಬಹುದು. ಭಾಷೆ ಮತ್ತು ಕಥಾವಸ್ತುವಿನಲ್ಲೂ ಸಾಕಷ್ಟು ಪ್ರಭಾವವಾಗಿರುವುದನ್ನು ಈ ಕಾವ್ಯದ ತೀವ್ರವಾದ ಪರಿಶೀಲನೆಯಿಂದ ಮನಗಾಣಬಹುದಾಗಿದೆ.

ಕ್ರಿ.ಶ. ಸುಮಾರು ೧೫೦೦ ರಲ್ಲಿದ್ದಿರಬಹುದಾದ ಚನ್ನವೀರಜಂಗಮ ಈ ವ್ಯಾಹದಲ್ಲಿ ಹೆಸರಿಸತಕ್ಕವನು. ಈತನ ಷಟ್ಸ್ಥಲವಲ್ಲಭ ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುವ ಒಂದು ಬೃಹದ್ಗ್ರಂಥ. ಈ ಅಪ್ರಕಟಿತ ಕಾವ್ಯ ಹಲವಾರು ದೃಷ್ಟಿಗಳಿಂದ ಮುಖ್ಯವಾದುದು. ವಸ್ತುವಿನ್ಯಾಸ ಭಾಷೆ ಭಾವ ಬಂಧಗಳಲ್ಲಿ ವಚನಸಾಹಿತ್ಯದ ಪ್ರಭಾವ ಇದರ ಮೇಲೆ ಸಾಕಷ್ಟಾಗಿರುವುದನ್ನು ನಿಚ್ಚಳವಾಗಿ ಗುರುತಿಸಬಹುದಾಗಿದೆ. ವಚನ ಸಾಹಿತ್ಯದಲ್ಲಿ ಪ್ರತಿಪಾದಿತವಾಗಿರುವ ಹಲವಾರು ಅಂಶಗಳು ಈ ಕಾವ್ಯದಲ್ಲಿ ಹಾಸುಹೊಕ್ಕಾಗಿಬಂದಿವೆ. ಈಮುಂದಿನ ಕೆಲವು ಉದ್ಧರಣಗಳಿಂದ ಒಂದು ಪಕ್ಷಿನೋಟವನ್ನು ಬೀರಬಹುದಾಗಿದೆ.

ಶಾಂತನೆಂಬಾ ಗುಣಾನ್ವಿತನೆ ಬಾ ಗುರುಭಕ್ತನಿಧಾನ ಬಾ ಸದಾ
ಅಂತವೈರೀ ಬಾ ಕರುಣಿ ಬಾ ವರಸತ್ಸ್ಮತಿಕಾಂತ ಬಾರೋ ಕಾ
ಮಾಂತಕ ಬಾರೋ ಎನ್ನ ಶಿವ ಬಾ ಗುರು ಬಾ ಚರಲಿಂಗಬಾರೋ ವೇ
ದಾಂತನೆ ಬಾರೊ ಎಂದು ಗುರು ಕರೆದಂ ಬಣ್ಣಿಸಿ ಸಿದ್ಧಲಿಂಗನಂ ||೨-೫೮||

ಚರಸಂತಾನವೆ ಸುಧಾನಿಧಿಯೆ ಬಾ ದ್ವೈತ ಬಾ ಪಂಚಾಸ್ಯ ಬಾ
ಹರಭಕ್ತ್ಯಾಬ್ಧಿ ಸುಧಾಮಯೂಖನಿಧಿ ಬಾರೆನ್ನಾಯುಷ್ಯ ಸಂಜೀವ ಬಾ
ಧರೆಯಂ ಪಾಲಿಪದೇವ ಬಾ ಸುಗುಣ ಬಾ ಸಿದ್ಧೇಶ ಬಾರೆಂಬುತಂ
ಕರೆದಂ ಶ್ರೀ ಗುರುಲಿಂಗಮೂರ್ತಿ ಹರ್ಷಾನಂದಾಶ್ರುವಿಂದುಕ್ಕುತಂ ||೨-೫೯||



ಗುರುಲಿಂಗವ ನರನೆಂಬಾ
ಚರಲಿಂಗವನೇನುಮೆಂದು ಮಱಿಯರ್ ಮತ್ತಾ
ಗಿರಿಸುತೆ ಪತಿಯಂ ಯಜಿಸರ್
ಶರಣಸ್ಥಲ ಕೆಟ್ಟುದೆಮ್ಮ ಸಮಯದೊಳೆಂದಂ ||೨-೯೫||

ಶ್ರೀ ಗುರುವಿನ ಹಸ್ತಮಸ್ತಕ ಸಂಯೋಗದಿಂದಾತ್ಮಶುದ್ಧಿಯಾದಂಗೆ ಮರಳಿಯಾತ್ಮ ಶುದ್ಧಿಯೆಲ್ಲಿಯದುಂ. ಪಂಚಾಕ್ಷರಿಯ ಮಂತ್ರರೂಪನಾದಂಗೆಱಿನ್ನುಳಿದ ಪಾಶುಪತ ಅಘೋರಾಸ್ತ್ರ ಮಂತ್ರಂಗಳಿಂ ಶುದ್ಧನಪ್ಪೆನೆಂಬ ಮಾತೆಲ್ಲಿಯದುಂ. ಲಿಂಗ ಸಿಂಹಾಸನಾದಾತ್ಮರುಗಳಿಗೆ ಬಾಹ್ಯಾಸನಗಳಿಂದೇನು ಪ್ರಯೋಜನಂ. ದಿಕ್ಪಾಲವಂದ್ಯ ಭಕ್ತರ್ಗಂ ದಿಗ್ಬಂಧನ ಕಾರ್ಯಂಗಳಿಂದೇನು ಪ್ರಯೋಜನಂ ||೪-೧೧೫ ವಚನ||

ಬಿಜ್ಜಳನ ಸಭೆಯೊಳಿರ್ದು ಯೋಜನಾಂತರದಲ್ಲಿ ಬೀಳ್ವ ಗೊಲ್ಲತಿಯ ತಕ್ರ ಘಟವಂ ಪಿಡಿದು ನೃಪಂಗೆ ದೃಷ್ಟವಂ ತೋಱಿದಂ.... ಬಿಜ್ಜಳನ ಸಂಗಡಂ ಬಸವೇಶಂ ವೈಹಾಳಿಯ ಹೋಹಾಗಲೊಬ್ಬ ಭಕ್ತಂ ಬೀದಿಯಲ್ಲಿ ನಿಂದು ತನ್ನ ಮಗನಂ ಬಸವಾ ಪ್ರಸಾದವಿದೆಕೋ ಎಂದೆನೆ ತಾಂ ಬಂದು ಈಸಿಕೊಂಡಂ ಅದಂಕಂಡು ಬಿಜ್ಜಳಂ ಅಂಗಡಿಯಲ್ಲಿರ್ಪ ಕಜ್ಜಾಯಂಗಳ ನೇಱೆಯೊಳ್ ತೀವಿದೆತ್ತಿ ಬಸವಾ ಲಡ್ಡುಕಂಗಳಿವೆಕೋ ಎನಲು ಹುಳಿತದೆ ಎನಲು ಹುಳ್ಳುವುದಿರ್ದವುಂ ||೪-೧೫೦ ವ.||

ಕೋಟಿ ಜಪ ಕೋಟಿ ತಪಗಳ್
ಕೋಟಿ ಶಿವಾರ್ಚನೆಯು ಕೋಟಿ ಫಲಗಳ್ ಕೆಟ್ಟುಂ
ಪಾಟಿಪುದೆ ನಿಂದೆ ಇಹದೊಳ್
ಮೀಟಿಹುದುಂ ಭವಿಸಂಗದಿಂ ನರಕಂ ಪರದೊಳ್ ||೭-೧೨೫||

ಸಾಲವ ಕೊಡುವಲಿ ಕೊಂಬಲಿ
ಶೂಲಿಯ ಭಕ್ತರ್ಗೆ ಕೊಡುವುದು ಕೊಂಬುದದಲ್ಲದೆ
ಮೇಲೆ ಭವಿಗೀಯೆ ತೆಗೆಯಲ್
ಕಾಲನವರ್ಗೆ ನರಕಕುಳಿಯವನಿಪನಾಗಂ ||೭-೧೨೬||

ಲಿಂಗಂ ವಿರಹಿತವಾದಾ
ಅಂಗನೆಯಾ ಪುತ್ರರನ್ನಾ ತನ್ನವರೆಂದಾ
ಲಿಂಗಿಸಿ ಚುಂಬಿಸಿದಾತಗೆ
ಸಂಗಿಸುವುದು ನಿರಯ ಚಂದ್ರ ರವಿಯುಳ್ಳನೆಗಂ ||೭-೧೩೦||

ಮಾನಸವೆಂಬ ಸಂಸ್ಕೃತಿಯ ಗೆದ್ದವ ಗೆದ್ದವ ತ್ರೈಮಲಂಗಳಂ
ಮಾನಸವೆಂಬ ಸಂಸ್ಕೃತಿಯ ಗೆದ್ದವ ಗೆದ್ದವ ದುಷ್ಕೃತಂಗಳಂ

ಮಾನಸವೆಂಬ ಸಂಸ್ಕೃತಿಯ ಗೆದ್ದವ ಗೆದ್ದವ ನರಕಂಗಳಂ
ಮಾನಸವೆಂಬ ಸಂಸ್ಕೃತಿಯ ಗೆದ್ದವ ಗೆದ್ದವ ಸರ್ವವೆಲ್ಲವಂ ||೯-೫||

ಈ ಕಾವ್ಯವನ್ನು ಗಾಢವಾಗಿ ಪರಿಶೀಲಿಸಿದವರಿಗೆ ವಚನಸಾಹಿತ್ಯದ ಪ್ರಭಾವ ಯಾವ ಪ್ರಕಾರದಲ್ಲಾಗಿದೆ ಎಂಬುದು ಸ್ವಯಂ ವೇದ್ಯವಾಗುತ್ತದೆ.

ಷಡಕ್ಷರಿ ಕನ್ನಡ ಸಾಹಿತ್ಯದ ಒಬ್ಬ ಸೀಮಾಪುರುಷ. ಹದಿನಾರನೆಯ ಶತಮಾನದಲ್ಲಿ ಬಾಳಿ ಬದುಕಿದ ಈತ ರಾಜಶೇಖರವಿಳಾಸ, ಶಬರಶಂಕರವಿಳಾಸ, ವೃಷಭೇಂದ್ರವಿಜಯವೆಂಬ ಚಂಪೂಕಾವ್ಯಗಳನ್ನು ಬರೆದಿರುವುದು ಸರ್ವವಿದಿತವಾದುದು. ಷಡಕ್ಷರಿ ಹರಿಹರನ ಅಚ್ಚಿನ್ನ ಭಕ್ತ. ಹರಿಹರನ ಕಾವ್ಯಮಾರ್ಗವನ್ನು ಈತನೂ ಅನುಸರಿಸಿದ್ದಾನೆ. ರಾಜಶೇಖರವಿಳಾಸದಲ್ಲಿ:

ಧರೆಯೊಳ್ ಮೇಣ್ ಪುಟ್ಟಿಪುಟ್ಟುತ್ತುರುಳ್ವ ನರರ ಮೇಲುರ್ಬಿ ಕಬ್ಬಂಗಳಂ ಬಿ
ತ್ತರಿಸುತ್ತಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ ಕೆಟ್ಟು ಪೋದರ್
ಹರಿದೇವಂ ದೇವ ದೇವೋತ್ತಮನ ಶರಣರಂ ಪಾಡಿ ಕೈವಲ್ಯ ಲಕ್ಷ್ಮೀ
ವರನಾದಂ ಮತ್ತಮಂಗತ್ಯಧಿಕ ಶಿವಕವೀಂದ್ರಂಗದಾರ್ ಸಾಟಿಯಪ್ಪರ್ ||೧-೯||

ಈ ರೀತಿ ಹೇಳಿ ಹರಿಹರನನ್ನೇ ಅನುಸರಿಸಿದ್ದಾನೆ. ಇದೇ ಕಾವ್ಯದಲ್ಲಿ ವಿವಿಧ ರಗಳೆಗಳನ್ನೂ ಬಳಸಲಾಗಿದೆ.

ಮಗನೆ ನೀನಂತಳಿಯೆ ಸೈರಿಪೆನೆಂತೋ ಪೇಳೈಶಂಕರಾ
ಸುಗುಣನಿಧಿ ನೀನೆನ್ನ ಮೊಱೆಗಳ ನೊರ್ಮೆ ಕೇಳೈಶಂಕರಾ
ಪರಸಿ ಪಾಡಿ ಮಹೇಶನಿಂದವೆ ಬೇಡಿ ಮುನ್ನಂ ಶಂಕರಾ
ತುರಗಖುರ ಕೆಂದಕಟ ಪೆತ್ತೆನೆ ಕುವರ ನಿನ್ನಂ ಶಂಕರಾ ||೧೩-೧೨೧,೧೨೨||

ವೃಷಭೇಂದ್ರ ವಿಜಯದಲ್ಲೂ ಹಲವಾರೆಡೆ ರಗಳೆಯನ್ನು ಬಳಸಲಾಗಿದೆ. ಒಟ್ಟಿನಲ್ಲಿ ಷಡಕ್ಷರಿ ತನ್ನ ಕಾವ್ಯಗಳಲ್ಲಿ ವಚನಸಾಹಿತ್ಯದ ಪ್ರಭಾವಕ್ಕೊಳಗಾಗಿರುವುದನ್ನು ಮನಗಾಣಬಹುದಾಗಿದೆ.

ಹದಿನೆಂಟನೆಯ ಶತಮಾನದ ಆದಿಭಾಗದಲ್ಲಿದ್ದ ಇಮ್ಮಡಿ ಗುರುಸಿದ್ಧ ಹಲವಾರು ಕೃತಿಗಳ ಕರ್ತೃ ಹರಿಹರ, ಷಡಕ್ಷರಿ ಇವರೇ ಮೊದಲಾದವರ ಪ್ರಭಾವ ಈತನ ಮೇಲೂ ಸಾಕಷ್ಟು ಆಗಿದೆ. ಹಾಲಾಸ್ಯ ಪುರಾಣದಲ್ಲಿ ಬರುವ ಕೈಲಾಸಪರ್ವತದ ವರ್ಣನೆ :

ಬೆಳ್ಳಿಯ ಬೆಟ್ಟನ ನಡುವಣ ನೆಲೆಯೊಳ್
ಬಳ್ಳಿವರಿದ ಬೆಳ್ವೆಳಗೊಬ್ಬುಳಿಯೊಳ್



ಚಿನ್ನದ ಗಿರಿ ತಾನಿರ್ಪುದು ತುದಿಯೊಳ್
ಬಿನ್ನಣದಿಂ ಮುಮ್ಮೊನೆಯಪ್ಪವಱೊಳ್ ||೧-೨೧ ರಗಳೆ||

ಈ ಕಾವ್ಯದಲ್ಲಿನ ಅರುವತ್ತನಾಲ್ಕು ಲೀಲೆಗಳನ್ನು ಒಂದೊಂದೇ ಸಾಲಿನ ವಚನಗಳಲ್ಲಿ ಹೇಳಿದೆ.

ಒಂದನೆಯದಿಂದ್ರಾನುಗ್ರಹಲೀಲೆ
ಎರಡನೆಯ ದೈರಾವತ ಶಾಪವಿಮೋಚನಲೀಲೆ
ಮೂಱನೆಯದು ಮಧುರಾಕದಂಬವನ ಪುರ ನಿರ್ಮಾಣಲೀಲೆ
ನಾಲ್ಕನೆಯದು ತಟಾಕಾರ್ಜುನಲೀಲೆ

**ಈ ಕಾವ್ಯದ ಹನ್ನೆರಡನೆಯ ಆಶ್ವಾಸದಲ್ಲಿ ಬರುವ :**

ದೊರೆಗಡ ಶಿವಭಕ್ತಂಗಡ
ಗೊರವರ್ ಗಡಲೋಕಲೋಕಪೂಜ್ಯರ್ ಗಡ ತಾ
ನುರುವ ವಿಮೋಕ್ಷಕ್ಕಂ ಸಲೆ
ಗುರುತದು ಗಡ ಬೂದಿಯಂ ಮಿಡಚ್ಚಿಯ ಮಣಿಯುಂ ||೧೨-೪||
ಜವನೂರಂ ಪಾಳ್ಮಾಡಿದ
ಶಿವಮನು ಗಡ ಜಗಮನುದ್ಧರಿಪುದಂತೆ ಗಡ
ಪ್ರವಿಮಳ ಜೈನರ್ ಗಡ ಪಶು
ನಿವಹಂ ಗಡ ತಮ್ಮ ಮತಮೆ ಶ್ರೇಷ್ಠಂ ಗಡದಲ್ ||೧೨-೫||

ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು ಗೌರೀಶಂಕರಸ್ವಾಮಿಗಳು ವಚನಸಾಹಿತ್ಯದ ಪ್ರಭಾವಕ್ಕೆ ಒಳಗಾಗಿದ್ದರು. ಅವರ ಕೃತಿಗಳ ಸೂಕ್ಷ್ಮ ಪರಿಶೀಲನೆಯಿಂದ ವ್ಯಕ್ತಪಡುತ್ತದೆ. ಪ್ರಕೃತ ಅವನ್ನು ಇಲ್ಲಿ ಸೂಕ್ಷ್ಮವಾಗಿ ಪರಿಶೀಲಿಸಿಲ್ಲ.

ಒಟ್ಟಿನಲ್ಲಿ ಈವರೆಗಿನ ವಿವೇಚನೆಯಿಂದ ಮಾರ್ಗಸಾಹಿತ್ಯದ ಮೇಲೆ ವಚನಸಾಹಿತ್ಯದ ಪ್ರಭಾವ ಎಷ್ಟರಮಟ್ಟಿಗೆ ಆಗಿದೆ ಎಂಬುದರ ಒಂದು ವಿಹಂಗಮ ನೋಟವನ್ನು ಬೀರಲಾಗಿದೆ. ಕಥಾವಸ್ತು, ಜೀವನ ದರ್ಶನ, ಭಾಷೆ, ನಿರೂಪಣಾರೀತಿ ಈ ಅಂಶಗಳಲ್ಲಿ ವಚನಸಾಹಿತ್ಯದ ಪ್ರಭಾವ ಮಾರ್ಗಸಾಹಿತ್ಯದ ಮೇಲೆ ಆಗಿರುವುದು ಸುಸ್ಪಷ್ಟವಾಗಿದೆ. ವಚನಕಾರರ ಧ್ಯೇಯಾದರ್ಶನಗಳನ್ನು ಈ ಮಾರ್ಗಕವಿಗಳು ತಪ್ಪದೆ ಅನುಸರಿಸಿದ್ದಾರೆ. ಆದರೆ ಈ ಅನುಸರಣೆ ಎಷ್ಟರಮಟ್ಟಿಗೆ ಆಗಿದೆ ಎಂಬುದನ್ನು ಬೆರಳು ಮಾಡಿ ತೋರಿಸುವುದು ಸಾಧ್ಯವಾಗದಿದ್ದರೂ ಈ ಎಲ್ಲ ಕಾವ್ಯಗಳ ಸೂಕ್ಷ್ಮ ಪರಿಶೀಲನೆಯಿಂದ ಸ್ವಯಂ ವೇದ್ಯವಾಗುತ್ತದೆ. ಈ ಎರಡೂ ಸಾಹಿತ್ಯ ಮಾರ್ಗಗಳನ್ನು ಅನನ್ಯ ಶ್ರದ್ಧೆಯಿಂದ ಅಭ್ಯಸಿಸಿದರೆ ಮಾತ್ರ ಸತ್ಯಾಂಶ ಸ್ಪಷ್ಟವಾಗಿ ಗೋಚರವಾಗಬಲ್ಲುದು. ಈಗಲಾದರೂ ಈ ಕಾರ್ಯ ನೆರವೇರಲಿ ಎಂದು ಹಾರೈಸುತ್ತೇನೆ.

# ಶುಕ್ರ ಗ್ರಹ

—ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

ಸೌರವ್ಯೂಹದಲ್ಲಿ ಸೂರ್ಯನ ಸುತ್ತಲೂ ಸುತ್ತುವ ಗ್ರಹಗಳಲ್ಲಿ ಶುಕ್ರಗ್ರಹವು ಕ್ರಮಾನ್ವಯದಲ್ಲಿ ಸೂರ್ಯನಿಂದ ಎರಡನೆಯ ಗ್ರಹ, ಬುಧಗ್ರಹದ (Mercury) ನಂತರ ಅದರ ಸ್ಥಾನ, ಈ ಗ್ರಹಕ್ಕೆ ಇಂಗ್ಲಿಷ್‌ನಲ್ಲಿ ವೀನಸ್ ಎಂದು ಹೆಸರು. ಇದು ಗ್ರೀಕರ "ಪ್ರೇಮದೇವತೆ" ಯೆಂದು ಭಾವಿಸಲ್ಪಟ್ಟಿದೆ. ಇದು ಬಹು ಪ್ರಕಾಶಮಾನವಾಗಿರುವುದರಿಂದ ಇದನ್ನು ಕನ್ನಡದಲ್ಲಿ "ಬೆಳ್ಳಿ" ಯೆಂದು ಕರೆಯುವ ರೂಢಿಯಿದೆ.

ಚಂದ್ರನ ನಂತರ ಶುಕ್ರನು ಪೃಥ್ವಿಗೆ ಅತ್ಯಂತ ನಿಕಟವಾಗಿದೆ. ಆದರೂ ಅದರ ವಾತಾವರಣ ಸ್ಥಿತಿಗಳನ್ನು ಸಮಂಜಸವಾಗಿ ತಿಳಿಯಲು ಖಗೋಳ ಶಾಸ್ತ್ರಜ್ಞರು ಬಹು ಪರಿಶ್ರಮಿಸಿದ್ದರೂ ಅದು ಇನ್ನೂ ಸಾಧ್ಯವಾಗಿಲ್ಲ. ಶುಕ್ರಗ್ರಹವು ಇತರ ಗ್ರಹಗಳಿಗಿಂತ ಬಹು ಭಿನ್ನವಾಗಿ ಅನೇಕ ವೈಶಿಷ್ಟ್ಯಗಳನ್ನು ಪಡೆದಿದೆ. ಸೂರ್ಯೋದಯಕ್ಕೆ ಮುಂಚೆ ಪೂರ್ವ ದಿಕ್ಕಿನಲ್ಲೂಸೂರ್ಯಾಸ್ತದ ನಂತರ ಪಶ್ಚಿಮ ದಿಕ್ಕಿನಲ್ಲೂ ಶುಕ್ರ ಪ್ರತಿನಿತ್ಯ ಕಾಣಿಸುತ್ತದೆ. ಅದರ ಚಲನವಲನವನ್ನರಿತ ತಜ್ಞರು ಅದನ್ನು ಹಗಲಿನಲ್ಲೂ ಗುರುತಿಸಬಲ್ಲರು. ಶುಕ್ರಗ್ರಹವು ಹಿಂದೆ ಹೆಸ್ಫೊರಸ್ ಎಂಬ ಅರುಣೋದಯದ ಗ್ರಹವೆಂದೂ, ಪೊಸ್ಫೊರಸ್ ಎಂಬ ಸಾಯಂಕಾಲದ ಗ್ರಹವೆಂದೂ, ಎರಡು ಪ್ರತ್ಯೇಕ ಗ್ರಹಗಳೆಂದು ಭಾವಿಸಲ್ಪಟ್ಟಿತ್ತು. ನಂತರ ಈ ಎರಡು ಗ್ರಹಗಳೂ ಒಂದೇ ಎಂಬ ಅರಿವು ಬಂದಿತು.

ಶುಕ್ರ ಗ್ರಹಕ್ಕೆ ನಕ್ಷತ್ರದಂತೆ ಸ್ವಯಂ ಪ್ರಕಾಶವಿಲ್ಲ. ಅದು ಸೂರ್ಯ ಪ್ರಕಾಶವನ್ನು ಪ್ರತಿಫಲಿಸುತ್ತದೆ. ಅದರ ಪಥ (orbit) ಸೂರ್ಯ ಮತ್ತು ಪೃಥ್ವಿಗಳ ನಡುವೆ ಇದೆ. ಶುಕ್ರ ಸೂರ್ಯನಿಗೆ ಪೃಥ್ವಿಗಿಂತ ಹೆಚ್ಚು ಹತ್ತಿರವಿರುವುದರಿಂದ ಅದು ಪೃಥ್ವಿಗಿಂತ ಹೆಚ್ಚು ಉಷ್ಣತೆ, ಬೆಳಕುಗಳನ್ನು ಪಡಯುತ್ತವೆ. ಅದು ತನ್ನ ಪಥದಲ್ಲಿ ಪೃಥ್ವಿಗಿಂತ ಹೆಚ್ಚು ವೇಗದಲ್ಲಿ ಹೋಗುತ್ತಿರುವುದರಿಂದ ಅದರಲ್ಲಿ ಒಂದು ವರ್ಷ ಪೃಥ್ವಿಯದಕ್ಕಿಂತ ಕಡಿಮೆ. ಪೃಥ್ವಿ ತನ್ನ ಪಥದಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ತಿರುಗುತ್ತದೆ; ಶುಕ್ರ ಪೂರ್ವದಿಂದ ಪಶ್ಚಿಮಕ್ಕೆ ಸುತ್ತುತ್ತದೆ. ಶುಕ್ರಗ್ರಹದಲ್ಲಿ ಸೂರ್ಯೋದಯ ಪಶ್ಚಿಮದಲ್ಲಿ ಆಗುತ್ತದೆ.

ಶುಕ್ರ ಸೂರ್ಯನಿಂದ 67,200,000 ಮೈಲು ದೂರದಲ್ಲೂ, ಭೂಮಿಯು 93,000,000 ಮೈಲು ದೂರದಲ್ಲೂ ಇವೆ. ಪೃಥ್ವಿ–ಶುಕ್ರರ ನಡುವಿನ ಅಂತರ 2,46,00,000 ಮೈಲು. ಚಂದ್ರನಿಗೂ ಪೃಥ್ವಿಗೂ ಇರುವ ದೂರದ ಹತ್ತರಷ್ಟು



ಹೆಚ್ಚು. ಶುಕ್ರ ಗ್ರಹದ ಪಥ ವೃತ್ತಾಕಾರವಾಗಿದೆ. ಆದ್ದರಿಂದ ಈ ದೂರದಲ್ಲಿ ವಿಶೇಷ ಸ್ಥಿತ್ಯಂತರವಾಗುವುದಿಲ್ಲ. ಸೂರ್ಯನಿಗೆ ಒಂದು ಪ್ರದಕ್ಷಿಣೆ ಹಾಕಲು ಶುಕ್ರನಿಗೆ 224 ದಿನ, 16 ಗಂಟೆ, 48 ನಿಮಿಷಗಳಾಗುತ್ತವೆ. ಇದು ಶುಕ್ರ ಗ್ರಹದಲ್ಲಿ ಒಂದು ವರ್ಷ. ಶುಕ್ರನ ಗುರುತ್ವಾಕರ್ಷಣ ಶಕ್ತಿ ಪೃಥ್ವಿಯದಕ್ಕಿಂತ ಕಡಿಮೆ. ಭೂಮಿಯ ಗುರುತ್ವಶಕ್ತಿಯ $\frac{58}{100}$ ರಷ್ಟು.

ಶುಕ್ರ ಮತ್ತು ಪೃಥ್ವಿಗಳಲ್ಲಿ ಅನೇಕ ಬಗೆಯ ಸಾದೃಶ್ಯವಿದ್ದರೂ, ಶುಕ್ರನ ಮೇಲ್ಮೈಯ ರಚನೆ, ಸ್ವರೂಪ, ಮತ್ತು ವಾತಾವರಣ ಶಾಸ್ತ್ರದ ಪ್ರಸಂಗಗಳು ತಿಳಿಯಲಾಗಿಲ್ಲ. ಶುಕ್ರನ ದಿವಸದ ಕಾಲಾವಧಿ ಎಷ್ಟು ಮತ್ತು ಅದು ತಿರುಗುವ ಕೇಂದ್ರದ ಅಕ್ಷವೆಲ್ಲಿದೆಯೆಂಬುದೂ ಅರಿವಾಗಿಲ್ಲ. ಶುಕ್ರನನ್ನು ಆವರಿಸಿರುವ ಮೋಡದ ಮುಸುಕು ಆ ಗ್ರಹವನ್ನು ಸದಾ ಮುಚ್ಚಿರುತ್ತದೆ. ಈ ಮುಸುಕು ಕೆಲವೇ ಗಂಟೆಗಳ ಕಾಲ ಒಂದೆರಡು ಮೈಲಿಯಷ್ಟು ತೆರೆದುಕೊಂಡರೂ ಶುಕ್ರನ ಬಗ್ಗೆ ಬಹಳ ವಿಷಯಗಳು ತಿಳಿದುಬರುತ್ತವೆ. ಪೃಥ್ವಿಯನ್ನು ಇತರ ಗ್ರಹಗಳಿಂದ ನೋಡಲಾಗದ ಮೋಡಗಳಿವೆ. ಆದರೆ, ಅವು ಸ್ಥಿರವಾಗಿರುವುದಿಲ್ಲ. ಕೆಲವೇ ಗಂಟೆಗಳಲ್ಲಿ ಕರಗುತ್ತದೆ. ಶುಕ್ರನನ್ನು ಆವರಿಸಿರುವ ಮೋಡಗಳು ಸ್ಥಿರವಾಗಿವೆ. ಬಹು ದಪ್ಪವಾಗಿವೆ.

ಶುಕ್ರನ ದಿನದ ಕಾಲಾವಿಧಿ ಗೊತ್ತಾಗಿಲ್ಲ. ಶುಕ್ರನು ತನ್ನ ಅಕ್ಷದ ಸುತ್ತ ಒಂದು ಪ್ರದಕ್ಷಿಣೆ ಮಾಡಲು ಹಿಡಿಯುವ ಕಾಲಾವಧಿಯೇ ಒಂದು ದಿನ. ಆದರೆ ತಿರುಗುತ್ತಿರುವ ಶುಕ್ರನ ಮೇಲ್ಮೈಯಲ್ಲಿ ಒಂದು ಗುರುತನ್ನು ದೃಢೀಕರಿಸಿ ಅದು ಪುನಃ ಪೃಥ್ವಿಗೆ ಕಾಣಿಸಿಕೊಳ್ಳಲು ಹಿಡಿಯುವ ಕಾಲಾವಧಿಯಿಂದ ದಿನದ ಕಾಲಮಾನವನ್ನು ನಿರ್ಧರಿಸಬಹುದು. ಆದರೆ ಮೋಡದ ಮುಸುಕಿನಿಂದ ಶುಕ್ರನ ಮೇಲ್ಮೈಯಲ್ಲಿ ಈ ರೀತಿ ಯಾವುದೇ ಗುರುತನ್ನು ಕಾಣಲು ಅಸಾಧ್ಯವಾಗಿದೆ.

ಶುಕ್ರನ ದಿನ ಮಾನದ ಬಗ್ಗೆ ನಾನಾ ವಾದ ವಿವಾದಗಳಿವೆ. ಈ ವಾದಗಳಲ್ಲಿ ಹೊಂದಾಣಿಕೆಯಿಲ್ಲ. ಶುಕ್ರನ ಮೇಲ್ಮೈಯನ್ನು ನೇರವಾಗಿ ನೋಡಲು ಅಸಾಧ್ಯ; ಮತ್ತು ಭೂಮಿಯಂತೆ ಶುಕ್ರನ ಧ್ರುವಗಳು ಚಪ್ಪಟೆಯಾಗಿರುವುದೂ ಈ ಅನಿಶ್ಚಿತತೆಗಳಿಗೆಲ್ಲ ಕಾರಣ.

ಶುಕ್ರನನ್ನುಆವರಿಸಿರುವ ಮೋಡದ ಮುಸುಕಿನ ರಚನೆಯವಿಷಯದಲ್ಲೂ ನಾನಾ ವಾದ ವಿವಾದಗಳಿವೆ. ಶುಕ್ರನು ನೀರಿನಿಂದ ತುಂಬಿದ ಗ್ರಹ ಮತ್ತು ಅದರ ಮುಸುಕು ನೀರಿನ ಮೋಡಗಳು ಎಂದು ಬಹು ಕಾಲ ಊಹಿಸಲಾಗಿತ್ತು. ಆದರೆ ಆ ಮುಸುಕು ಪೃಥ್ವಿಯ ಮೋಡಗಳಂತೆ ಅಸ್ಥಿರವಾಗಿರದೆ ಸದಾ ವ್ಯಾಪಿಸಿಕೊಂಡಿರುವುದರಿಂದ ಆ ಭಾವನೆ ವಾಸ್ತವ್ಯವೆನಿಸಲಿಲ್ಲ. ಶುಕ್ರನಿಂದ ಪ್ರತಿಫಲಿಸಿದ ಕಿರಣಗಳನ್ನು ವರ್ಣಪಟಲ ದರ್ಶಕದ(Spectroscore)ವಿಶ್ಲೇಷಣದಿಂದ ಪರೀಕ್ಷಿಸಿದಾಗ ನೀರಿನ ಗುಣಧರ್ಮ ರೇಖೆಗಳು ಕಂಡುಬರಲಿದೆ. ಈ ವಿಶ್ಲೇಷಣದಿಂದ ಬಹಳ ಇಂಗಾಲಾಮ್ಲವಿರುವುದು ತಿಳಿದು ಬಂದಿದೆ.

ಕೆಲವು ಖಗೋಳಜ್ಞರು ಇನ್ನೊಂದು ಪ್ರಬಲವಾದ ಭಾವನೆಯನ್ನು ಕಲ್ಪಿಸಿದರು. ಅದೇನೆಂದರೆ ಶುಕ್ರನು ಮೂಳೆಯಂತೆ ಒಣಕಲಾಗಿರುವ ಮತ್ತು ಭಾರಿ ಬಿರುಗಾಳಿಗೆ ಗುರಿಯಾದ ಮರಳರಾಶಿ. ಇಂಗಾಲಾಮ್ಲವೇ ಬಹು ಪ್ರಮಾಣದಲ್ಲಿರುವ ಶುಕ್ರನ ಮೇಲೆ ಜೀವಜಂತುಗಳಿಲ್ಲ ಎಂಬುದು ಇನ್ನೊಂದು ಭಾವನೆ. ಕೆಲವು ಖಗೋಳಜ್ಞರು ಪ್ರತಿಫಲಿತ ಕಾಂತಿ ಪ್ರಮಾಣ ತತ್ವ (albedo) ದಿಂದ ಪ್ರಬಲ ನಿರ್ಣಯಗಳನ್ನು ಮಾಡಿದ್ದಾರೆ. "ಆಲ್ಬೆಡೋ" ಎಂದರೆ ಒಂದು ವಸ್ತುವು ಇನ್ನೊಂದು ವಸ್ತುವಿನಿಂದ ಪಡೆಯುವ ಬೆಳಕನ್ನು ತಾನು ತಿರುಗಿ ಪ್ರತಿಫಲಿಸುವ ಬೆಳಕಿನ ಪ್ರಮಾಣ. ಕರಿಯ ವಸ್ತುವು ತನ್ನ ಮೇಲೆ ಬೀಳುವ ಸುಮಾರು ಎಲ್ಲ ಬೆಳಕನ್ನೂ ಹೀರಿಕೊಳ್ಳುತ್ತದೆ. ಪ್ರತಿಫಲಿತ ಪ್ರಮಾಣ ಬಹು ಕಡಿಮೆ. ಹೊಳೆಯುವ ಕನ್ನಡಿ ತನ್ನ ಮೇಲೆ ಬೀಳುವ ಎಲ್ಲ ಬೆಳಕನ್ನೂ ಪ್ರತಿಫಲಿಸಬಹುದು. ಬುಧನ ಆಲ್ಬೆಡೋ ಶೇಕಡ 5½. ಇದು ಚಂದ್ರನ ಆಲ್ಬೆಡೊ ಪ್ರಮಾಣಕ್ಕಿಂತ ಕಡಿಮೆ. ಮಂಗಳನ ಆಲ್ಬೆಡೋ ಶೇಕಡ 15. ಪೃಥ್ವಿಯ ಆಲ್ಬೆಡೋ ಶೇಕಡ 50 ರಿಂದ 80 ರವರೆಗಿನ ಮಧ್ಯದಲ್ಲಿದೆ. ಶುಕ್ರನ ಆಲ್ಬೆಡೋ ಶೇಕಡ 59 ರಷ್ಟು. ಶುಕ್ರನ ಆಲ್ಬೆಡೋ ಬಹು ಆಶ್ಚರ್ಯಕಾರಿ. ಏಕೆಂದರೆ ಬಹು ಪ್ರತಿಫಲ ಶಕ್ತಿಯುಳ್ಳ ಅಮೋನಿಯಾ, ಮಿಥೇನ್, ಹಿಮದ ಗಡ್ಡೆಗಳುಳ್ಳ ಅನಿಲಕ್ಕೆ ಕೂಡ ಶೇಕಡ 50 ರಷ್ಟು ಆಲ್ಬೆಡೋ ಇದೆ. ಪೃಥ್ವಿಯಲ್ಲಿ ಬಿಳೀ ಮೋಡಗಳು ಮತ್ತು ಆಗತಾನೆ ಬಿದ್ದ ಮಂಜಿನ ಕಣಗಳಿಗೆ ಶುಕ್ರನಷ್ಟು ಆಲ್ಬೆಡೋ ಇದೆ. ಆದ್ದರಿಂದ ಶುಕ್ರ ಅನಿಲ ಅಥವಾ ಘನರೂಪದಲ್ಲಿನ ನೀರಿನ ಅಸ್ತರಣದಿಂದ ಆವೃತವಾಗಿರಬೇಕೆಂದು ವಿಜ್ಞಾನಿಗಳು ನಿಶ್ಚಯಿಸಿದ್ದಾರೆ.

ವಾತಾವರಣದಲ್ಲಿ ಮೇಲೆ ಮೇಲೆ ಹೋದಂತೆ ಶೈತ್ಯ ಹೆಚ್ಚಾಗುತ್ತಾ ಹೋಗುತ್ತದೆ. ಶುಕ್ರನನ್ನು ಮುಚ್ಚಿರುವ ಮೋಡದ ಮುಸುಕು ಬಹು ದಪ್ಪ ಅಥವಾ ಎತ್ತರವಾಗಿರುವುದರಿಂದ ಅದರ ಹೊರಭಾಗ ಬಹು ತಣುಸಾಗಿದ್ದು, ನೀರು ನೀರ್ಗಲ್ಲಿನ ಅಥವಾ ಮಂಜಿನ ಶೀತ ಸಂಸ್ತರಗಳಾಗಿರಬಹುದು. ಇದು ವರ್ಣಪಟಲ ದರ್ಶಕದಿಂದ ತಿಳಿದು ಬರುವುದಿಲ್ಲ. ಆದ್ದರಿಂದ ಶುಕ್ರನಲ್ಲಿ ನೀರೇ ಇಲ್ಲವೆಂದು ಹೇಳಲಾಗದು.

ಶುಕ್ರನಲ್ಲಿ ಆಮ್ಲಜನಕವಿದೆಯೇ ಎಂಬ ಪ್ರಶ್ನೆ ಏಳುತ್ತದೆ. ಶುಕ್ರನಲ್ಲಿ ಇಂಗಾಲಾಮ್ಲ ಬಹಳವಿದ್ದರೂ ಅದರೊಡನೆ ಜಡ ಅನಿಲವಿರಬೇಕೆಂದು ಖಗೋಳ ವಿಜ್ಞಾನಿಗಳು ಹೇಳುತ್ತಾರೆ. ವರ್ಣಪಟಲ ದರ್ಶಕವು ಆಮ್ಲಜನಕವನ್ನು ತೋರಿಸಿಲ್ಲ. ಆದರೆ ಆಮ್ಲಜನಕವು ಓಸೋನ್ (ozone) ರೂಪದಲ್ಲಿದ್ದು ಶುಕ್ರನ ಮೇಲ್ತಳಕ್ಕೆ ತಗ್ಗಿ ಆಮ್ಲಜನಕ ಇರಬಹುದಾದ ಸಾಧ್ಯತೆ ಇದೆ. ಈ ಕಾರಣಗಳಿಂದ ಶುಕ್ರನು ಒಣ ಮರುಭೂಮಿಯಂತಿರುವ ಗೋಲವೆಂಬ ತತ್ವವನ್ನು ತಳ್ಳಿಹಾಕಲಾಗದಿದ್ದರೂ, ಅದು ನೀರಿನ ಮೋಡಗಳಿಂದ ಆವೃತವಾದ ಗ್ರಹವೆನ್ನಲು ಹೆಚ್ಚು ಪುರಾವೆಗಳಿವೆ.

ಮುಂದಾದರೂ ಖಗೋಳ ಸಂಶೋಧಕರು ಆಕಾಶ ನೌಕೆಯಲ್ಲಿ ಶುಕ್ರನಲ್ಲಿಗೆ ಹೋಗಿ ಅಲ್ಲಿಂದ ಸಂದೇಶಗಳನ್ನು ಕಳಿಸಿದರೆ ನಿಜ ಸ್ಥಿತಿ ಗೊತ್ತಾಗುವುದು. ಆ ದಿನ ಬರಬಹುದು.



# ವಿನೋಬಾ ದೃಷ್ಟಿಯಲ್ಲಿ ಮಹಿಳೆ

—ಜಿ. ಶಾರದರಾಜಶೇಖರ್

ವಿನೋಬಾರವರ ದೃಷ್ಟಿಯಲ್ಲಿ ಸ್ತ್ರೀ-ಪುರುಷರಲ್ಲಿ ಭೇದವೆಣಿಸುವ ಪ್ರವೃತ್ತಿಯೇ ಇಲ್ಲ. ಯಾವ ಯಾವ ಸಾಮಾಜಿಕ, ಕೌಟುಂಬಿಕ ಮತ್ತು ರಾಜಕೀಯ ಅಧಿಕಾರ ಹಾಗೂ ಕರ್ತವ್ಯಗಳು ಪುರುಷರಿಗೆ ಇರುತ್ತವೆಯೋ ಅವೇ ಸ್ತ್ರೀಯರಿಗೂ ಇರಬೇಕೆಂದು ಬಯಸುತ್ತಾರೆ. ಸ್ತ್ರೀ-ಪುರುಷರಲ್ಲಿಯ ಭೇದವು ಬಾಹ್ಯವಾದದ್ದು, ಮೂಲಭೂತವಾದದ್ದಲ್ಲ. ಸ್ತ್ರೀ-ಪುರುಷರಲ್ಲಿ ಸಮಾನವಾದ ಮಾನವ ಆತ್ಮ ಇರುತ್ತದೆ. ಆದ್ದರಿಂದ ಬಾಹ್ಯಭೇದಗಳು ಕಾಣುತ್ತಿದ್ದರೂ ಕೂಡ ಅವುಗಳಿಗೆ ಮಹತ್ವ ಕೊಡುವ ಅವಶ್ಯಕತೆ ಇಲ್ಲ ಎನ್ನುತ್ತಾರೆ, ಮೋಕ್ಷದ ಅಧಿಕಾರವೂ ಕೂಡ ಇಬ್ಬರದೂ ಸಮಾನವಿರುತ್ತದೆ.

"ಸ್ತ್ರೀಯು ಪುರುಷರಿಗಿಂತ ಶ್ರೇಷ್ಠ ಇರುತ್ತಾಳೆ, ಅವಳಲ್ಲಿ ದಯಾಭಾವವು ಸಹಜವಾಗಿಯೇ ಹೆಚ್ಚು ಇರುತ್ತದೆ. ಚಿಕ್ಕಮಕ್ಕಳ ಶಿಕ್ಷಣ ಮತ್ತು ಸಮಾಜ ಶಾಸನಗಳನ್ನು ಹೆಣ್ಣುಮಕ್ಕಳ ಕೈಯಲ್ಲಿ ಕೊಟ್ಟರೆ ಅಹಿಂಸಕ ಸಮಾಜ ರಚನೆಯು ಸುಲಭವಾಗಿ ಸಾಧಿಸೀತು" ಈ ಎಲ್ಲ ಕಾರ್ಯಗಳಲ್ಲಿ ಸ್ತ್ರೀಯರು ಭಾಗವಹಿಸಬೇಕೆಂದು ಬಯಸುತ್ತಾರೆ.

ಸ್ತ್ರೀಯರಲ್ಲಿ ಶಂಕರಾಚಾರ್ಯರಂತಹ ತೇಜಸ್ವಿಯೊಬ್ಬಳೇ ಯಾವಳೊಬ್ಬಳು ಸ್ತ್ರೀ ಪ್ರಕಟವಾದಾಗಲೇ ಸ್ತ್ರೀಯರ ಉದ್ಧಾರವಾದೀತೆಂದು ನಾನು ತಿಳಿಯುತ್ತೇನೆ. ಸ್ತ್ರೀಯರು ಸ್ವಾತಂತ್ರ್ಯವನ್ನು ಬಯಸುತ್ತಿದ್ದರೆ ಅವರು ವಾಸನೆಯ ಪ್ರವಾಹದಲ್ಲಿ ಹರಿದುಹೋಗಬಾರದು. "ಹಳ್ಳಿಯ ಸ್ತ್ರೀಯರನ್ನು ನೋಡಿದಾಗ ಅವರು ಶಹರದ ಸ್ತ್ರೀಯರಿಗಿಂತ ಹೆಚ್ಚು ಸ್ವತಂತ್ರ ಇದ್ದಾರೆಂಬುದು ನನಗೆ ಕಾಣಿಸುತ್ತದೆ. ಅವಳು ತನ್ನ ದುಷ್ಟಪ್ರವೃತ್ತಿಯ ಗಂಡನ ಮೋರೆಗೂ ಬಿಗಿಯುತ್ತಾಳೆ, ಇಂಥ ಉದಾಹರಣೆಗಳನ್ನು ನಾನು ನೋಡಿದ್ದೇನೆ. ಓದುಬರಹ ಬಲ್ಲ ಸ್ತ್ರೀಯರದಲ್ಲ, ನಿರಕ್ಷರಿಗಳದು. ಓದು ಬರಹ ಬಲ್ಲ ಸ್ತ್ರೀಯರಾದರೋ ಹೆಚ್ಚು ಮೆತ್ತಗಾಗಿರುವುದು ಕಾಣುತ್ತದೆ. ಅವರು ಓದು ಬರಹ ಬಲ್ಲವರಾದ್ದರಿಂದಲ್ಲ. ವಿಲಾಸ ಜೀವಿಗಳಾಗಿರುವುದರಿಂದ. ಅಡವಿಯಲ್ಲಿಯ ಸಿಂಹವು ವಿಶ್ರಾಂತಿ ಪ್ರಿಯವಾಗಿರುವುದಿಲ್ಲ. ಆದ್ದರಿಂದಲೇ ಅದು ಸ್ವತಂತ್ರವಿರುತ್ತದೆ." ಸ್ತ್ರೀ-ಪುರುಷರು ಪರಸ್ಪರರ ರಕ್ಷಕರೂ ಆಗಬಹುದು. ಸ್ತ್ರೀಯು ಪುರುಷನನ್ನು ರಕ್ಷಿಸಬಹುದು, ಪುರುಷನು ಸ್ತ್ರೀಯನ್ನು ರಕ್ಷಿಸಬಹುದು. ಸ್ತ್ರೀ-ಪುರುಷರಿಬ್ಬರೂ ತಮ್ಮ ತಮ್ಮ ನ್ಯೂನತೆಗಳನ್ನು ಸರಿಪಡಿಸಿಕೊಳ್ಳುತ್ತ ಪರಿಪೂರ್ಣ ಸ್ತ್ರೀ-ಪುರುಷರಾಗುವುದೇ ಅವಶ್ಯವಿರುತ್ತದೆ. ಅರ್ಥಾತ್ ಪುರುಷ ಸ್ತ್ರೀಯಾಗಬೇಕು ಸ್ತ್ರೀಯು ಪುರುಷನಾಗಬೇಕು, ಮತ್ತು ಇಬ್ಬರೂ ಪರಿಪೂರ್ಣರಾಗಬೇಕು.

ಸ್ತ್ರೀಯರ ನಮ್ರತೆ ಮತ್ತು ವಿವೇಕಗಳನ್ನು ಕಲಿಯುವುದೇ ಪುರುಷರು ಸ್ತ್ರೀಯರಾಗಬೇಕೆಂಬುದರ ಅರ್ಥ. ಮತ್ತು ಸ್ತ್ರೀಯರು ಭಯವನ್ನು ಬಿಟ್ಟು ಸಾಹಸಿಗರೂ ಹಾಗೂ ಶೂರರೂ ಆಗಬೇಕು ಎಂಬುದೇ ಸ್ತ್ರೀಯರು ಪುರುಷರಾಗಬೇಕೆಂಬುದರ ಅರ್ಥ.

ಸಾಹಿತ್ಯ, ಶಿಕ್ಷಣ, ಧರ್ಮದ ಆಯೋಜನ ಮೊದಲಾದ ಕ್ಷೇತ್ರಗಳಲ್ಲಿ ಸ್ತ್ರೀಯರಿಗೆ ಸ್ಥಾನ ಸಿಗಬೇಕು. ಸ್ತ್ರೀಯರ ಒಂದು ಅಧಿಕಾರವನ್ನು ಯಾರೂ ಕಸಿದುಕೊಳ್ಳಲಾರರು. ಆದರೆ ಆ ಅಧಿಕಾರವನ್ನು ಕಸಿದುಕೊಳ್ಳಲಿಕ್ಕೆ ಪುರುಷರಿಗೆ ಶಕ್ಯವಿದ್ದರೆ ಅದನ್ನು ಕಸಿದುಕೊಳ್ಳುತ್ತಿದ್ದರು. ಆದರೆ ಮಗು ತಾಯಿಯ ಹೊಟ್ಟೆಯಿಂದಲೇ ಹುಟ್ಟುವಂಥ ಯೋಜನೆಯನ್ನು ಪರಮೇಶ್ವರನೇ ಮಾಡಿದ್ದಾನೆ, ಆದ್ದರಿಂದ ಅದು ಪುರುಷರ ಕೈಯಲ್ಲಿ ಬರಲಿಕ್ಕೆ ಸಾಧ್ಯವಿಲ್ಲ. ಅವರು ಸ್ತ್ರೀಯರನ್ನು ಈ ಸ್ಥಾನದಿಂದ ಬದಿಗೆ ಸರಿಸಲಾರರು.

ಭಾರತದ ಸ್ತ್ರೀಯರು ತಮ್ಮ ಆತ್ಮ ಶಕ್ತಿಯ ಅರಿವನ್ನಿಟ್ಟುಕೊಂಡು ಮುಂದೆ ಬರಬೇಕೆಂದು ನಾನು ಬಯಸುತ್ತೇನೆ. ಇನ್ನು ಮುಂದೆ ಸಮಾಜದ ನಿಯಂತ್ರಣವು ಸ್ತ್ರೀಯರ ಕೈಯಲ್ಲಿಯೇ ಬರಲಿದೆ. ಅದಕ್ಕಾಗಿ ಸ್ತ್ರೀಯರು ತಯಾರಾಗಬೇಕು.

ಸ್ತ್ರೀಯರು ಸಾಮಾಜಿಕ ಕ್ಷೇತ್ರದಲ್ಲಿ ಮುಂದೆ ಬರಬೇಕು, ಹಾಗೂಪುರುಷರ ಮೇಲೆ ನಿಯಂತ್ರಣ ಇಡುವ ಕೆಲಸವನ್ನು ಮಾಡಬೇಕು. ಭಾರತದ ಸ್ತ್ರೀಯರಿಂದ ನಾನು ಇದನ್ನೇ ಅಪೇಕ್ಷಿಸುತ್ತೇನೆ.

ಈ ವಿಜ್ಞಾನ ಯುಗದಲ್ಲಿ ಪುರುಷರ ಬುದ್ಧಿಯು ಸ್ತಂಭಿತವಾಗಿರುವಾಗ ಸ್ತ್ರೀಯರು ಕೆಲಸಕ್ಕೆ ಹತ್ತಿದರೆ ಮತ್ತು ತಮ್ಮ ದೈವೀಗುಣಗಳಿಂದ ಸಂಯಮ ಶೀಲತೆಯಿಂದ ಹಾಗೂ ತಮ್ಮ ಮಾತೃ ಶಕ್ತಿಯಿಂದ ಮುಂದೆ ಬಂದರೆ ಕರುಣೆಯ ರಾಜ್ಯವು ಸ್ಥಾಪಿತವಾದೀತು.

ಮಾನವ ಶರೀರದಲ್ಲಿ ತಮೋ ಗುಣವಿರುವುದರಿಂದ ನಡು ನಡುವೆ ಅವರಿಗೆ ಚಾಲನೆ ಅಥವಾ ಪ್ರೇರಣೆ ಕೊಡುವ ಅವಶ್ಯಕತೆ ಬೀಳುತ್ತದೆ. ಇಂದಾದರೋ ತಮೋ ಗುಣದಿಂದ ಸಮಾಜದಲ್ಲಿ ಎಷ್ಟೋ ಅಹಲ್ಯೆಯರು ಕಲ್ಲಾಗಿ ಬಿದ್ದಿದ್ದಾರೆ. ಅವರಿಗೆ ಒಮ್ಮೆ ಪ್ರೇರಣೆ ಕೊಟ್ಟರೆ ಅವರು ಕೂಡಲೇ ಎದ್ದು ಕೆಲಸಕ್ಕೆ ಹತ್ತಿಯಾರು. ಗಡಿಯಾರಕ್ಕೂ ಸಹ ಇಪ್ಪತ್ತನಾಲ್ಕು ಘಂಟೆಗಳಲ್ಲಿ ಒಮ್ಮೆ ಕೀಲಿ ಗೊಡಬೇಕಾಗುತ್ತದೆ. ಇದರಂತೆಯೇ ನಡುನಡುವೆ ಅವರಿಗೆ ಪ್ರೇರಣೆ ಕೊಡಲೇಬೇಕಾಗುವುದು. ಅದರೂ ಸ್ತ್ರೀಯರ ಕೈಯಲ್ಲಿ ಸಮಾಜವು ಸುರಕ್ಷಿತವಾಗಿಯೇ ಉಳಿದೀತು. ಒಮ್ಮೆ ಕೈಯಲ್ಲಿ



ತಕ್ಕೊಂಡ ಒಳ್ಳೆಯ ಕೆಲಸವನ್ನು ಅವರು ಎಂದೂ ಬಿಡುವುದಿಲ್ಲ. ಸ್ತ್ರೀಯರಲ್ಲಿ ಧರ್ಮ ಬುದ್ಧಿಯು ಜಾಗ್ರತ ಇರುವುದರಿಂದಲೇ ಅವರ ಕೈಯಲ್ಲಿ ಈ ಕೆಲಸವನ್ನು ಒಪ್ಪಿಸಲಿಕ್ಕೆ ಯಾವುದೇ ಅಡ್ಡಿ ಇಲ್ಲ.

ಸ್ತ್ರೀ ಶಕ್ತಿಯು ರಾಷ್ಟ್ರಕಾರ್ಯದಲ್ಲಿ ತೊಡಗಿದರೆ ನಿಶ್ಚಯವಾಗಿಯೂ ರಾಷ್ಟ್ರದ ಪ್ರಗತಿಯಾದೀತು. ಪುರುಷರ ಮರ್ಯಾದೆಯ ವಸ್ತ್ರಾಪಹರಣ ಪ್ರಾರಂಭವಾಗಿದೆ ಅವರ ಮರ್ಯಾದೆ ಉಳಿಸುವದಕ್ಕೆ ಸ್ತ್ರೀ ಶಕ್ತಿಯು ಮುಂದೆ ಬರಬೇಕು-

ಸ್ತ್ರೀಯರಲ್ಲಿ ಆತ್ಮಶಕ್ತಿಯ ಕೊರತೆ ಇಲ್ಲ. ಆದರೆ ಅದನ್ನು ಪ್ರಕಟಮಾಡಬೇಕಾದರೆ ಅದಕ್ಕೆ ತಕ್ಕಂತೆ ಜೀವನವನ್ನು ರೂಪಿಸಿಕೊಳ್ಳಬೇಕಾಗುವದು. ಭೋಗವಿಲಾಸಗಳಿಂದ ತುಂಬಿದ ಜೀವನವಾದರೋ ಪ್ರಸಂಗ ಬಂದಾಗ ಹೇಡಿಯಾಗಿ ಬಿಡುತ್ತದೆ. ಸ್ತ್ರೀಯರು ಅಹಿಂಸಾ ಶಕ್ತಿಯನ್ನು ಪ್ರಕಟಗೊಳಿಸಿ ಜಗತ್ತನ್ನು ಉಳಿಸುವ ಪರಾಕ್ರಮ ಮಾಡಬೇಕು. ಸ್ತ್ರೀಯರು ಸುರಕ್ಷಿತರಾದರೆ ಸಾಲದು. ಸ್ವರಕ್ಷಿತರಾಗಬೇಕು ಸ್ತ್ರೀಯರಲ್ಲಿ ರಕ್ಷಣಶಕ್ತಿಯು ಇಲ್ಲವೆಂದು ಹೇಳವುದು ತಪ್ಪು. ಸ್ತ್ರೀಯರ ಶರೀರವು ಪುರುಷರ ಶರೀರಕ್ಕಿಂತ ಹೆಚ್ಚು ರಕ್ಷಣ ಸಮರ್ಥ ವಾಗಿರುತ್ತದೆಂದು ವಿಜ್ಞಾನವು ಹೇಳುತ್ತದೆ.

ತಾನು ಸ್ವತಂತ್ರನಾಗಬೇಕು ಅಥವಾ ಸ್ವತಂತ್ರನಾಗುವ ಶಕ್ತಿ ತನ್ನಲ್ಲಿದೆ ಎಂಬುದೇ ಹಿಂದಿನ ಕಾಲದ ಗುಲಾಮರಿಗೆ ಗೊತ್ತಿರಲಿಲ್ಲ. ಇಂದು ಹೆಣ್ಣು ಮಕ್ಕಳ ಅವಸ್ಥೆಯು ಕೆಲಮಟ್ಟಿಗೆ ಹಾಗೇ ಇರುತ್ತದೆ. ಆಗುಲಾಮರಿಗೆ ಸ್ವಾತಂತ್ರ್ಯ ಸಿಕ್ಕಾಗ ಕೆಲವು ಕಾಲದವರೆಗೆ ತಮ್ಮ ಆಧಾರವೇ ತಪ್ಪಿ ಹೋದಂತೆ ಅವರಿಗೆ ಅನಿಸಿತು. ಹೆಣ್ಣುಮಕ್ಕಳಿಗೆ ತಾವು ಪುರುಷರ ದಾಸಿಯರೆಂದು ತಿಳಿದುಕೊಳ್ಳಲಿಕ್ಕೆ ಕಲಿಸಲಾಗಿದೆ. ಆದ್ದರಿಂದ ಸ್ತ್ರೀಯರಿಗೆ ಅವರ ಮೌಲಿಕ ಸ್ಥಿತಿಯ ಸರಿಯಾದ ಕಲ್ಪನೆ ಮಾಡಿಕೊಡುವುದು ಮತ್ತು ಅವರು ಜೀವನದಲ್ಲಿ ಪುರುಷರ ಜೊತೆಯಲ್ಲಿ ಸರಿಸಮಾನವಾದ ಮಟ್ಟದಲ್ಲಿ ಸಹಾಯ ಮಾಡುವಂತೆ ಶಿಕ್ಷಣ ಕೊಡಬೇಕಾಗಿದೆ"

ಸ್ತ್ರೀಯರ ಉದ್ಧಾರವನ್ನು ಪುರುಷರು ಮಾಡಲಾರರು. ಅದನ್ನು ಸ್ತ್ರೀಯರೇ ಸ್ವತಃ ಮಾಡಿಕೊಳ್ಳಬೇಕಾಗುವುದು.

---

ಜೇನು ಹುಳುಗಳು ಎಲ್ಲ ಪುಷ್ಪಗಳಲ್ಲಿಯೂ ಇರುವ ಮಕರಂದವನ್ನು ಹೀರುತ್ತವೆ ಹಾಗೆಯೇ ಸಾಧಕನು ಎಲ್ಲ ಮತ ಗ್ರಂಥಗಳಿಂದಲೂ ಜ್ಞಾನವನ್ನು ಪಡೆಯುತ್ತಾನೆ, ಮತ್ತು ಅದರಿಂದ ತನ್ನ ಮತದ ವಿಚಾರವಾಗಿ ಹೆಚ್ಚಿನ ಅರಿವನ್ನು ಗಳಿಸಿಕೊಳ್ಳುತ್ತಾನೆ

—ಯೋಗದೀಪಿಕಾ.

# ಪುರಾಣ ಮುನಿಗಳು

## ಅತ್ರಿ

—ಪ. ರಾಮಕೃಷ್ಣ ಶಾಸ್ತ್ರಿ

ವೈವಸ್ವತ ಮನ್ವಂತರದ ಸಪ್ತರ್ಷಿಗಳಲ್ಲಿ ಅತ್ರಿಯೂ ಒಬ್ಬ. ಅವನು ಬ್ರಹ್ಮನ ಕಣ್ಣಿನಿಂದ ಜನಿಸಿದ ಎಂದು ಹೇಳುತ್ತಾರೆ. ಬ್ರಹ್ಮನು ಅವನೊಂದಿಗೆ ಗಂಗಾ, ಯಮುನಾ ನದಿಗಳ ಸಂಗಮ ಸ್ಥಳದಲ್ಲಿ ಆಶ್ರಮವನ್ನು ನಿರ್ಮಿಸಿಕೊಂಡು ವಾಸವಾಗಿರಲು ಹೇಳಿದ. ಅಲ್ಲಿರುವಾಗ ಅತ್ರಿಗೆ ಕರ್ದಮ ಪ್ರಜಾಪತಿ ಮತ್ತು ದೇವಹೂತಿಯರ ಮಗಳು ಅನಸೂಯೆಯೊಂದಿಗೆ ಮದುವೆಯಾಯಿತು. ತಮಗೆ ಮಕ್ಕಳಾಗಬೇಕೆಂದು ಅತ್ರಿಯು ಸರ್ವಲೋಕೈಕನಾಥನಾದ ದೇವರನ್ನು ಕುರಿತುತ ಪಸ್ಸಿಗಾರಂಭಿಸಿದ.

ಆಗ ಬ್ರಹ್ಮ, ವಿಷ್ಣು, ಮಹೇಶ್ವರರು ಅತ್ರಿಯೆದುರು ಪ್ರತ್ಯಕ್ಷರಾದರು. ಅವರೊಂದಿಗೆ ಅವನು "ನಿಮ್ಮಲ್ಲಿ ಯಾರು ಲೋಕೈಕನಾಥರು ? ಅವರು ನನಗೊಬ್ಬ ಮಗನನ್ನು ಅನುಗ್ರಹಿಸಬೇಕು" ಎಂದ.

ತ್ರಿಮೂರ್ತಿಗಳು, "ನಾವು ಮೂವರು ಸರ್ವ ಲೋಕೈಕನಾಥರು. ಆದ್ದರಿಂದ ನಾವು ನಿನಗೆ ಮೂವರು ಮಕ್ಕಳನ್ನು ಅನುಗ್ರಹಿಸುತ್ತೇವೆ" ಎಂದರು. ಅವರ ವರದಿಂದ ಅತ್ರಿಯ ಕಣ್ಣಿನಿಂದ ಬ್ರಹ್ಮನ ಅಂಶಭವನಾದ ಚಂದ್ರನೂ, ಅನಸೂಯೆಯ ಗರ್ಭದಿಂದ ಶಿವನ ಅಂಶದಿಂದ ದೂರ್ವಾಸನೂ ಹರಿಯ ಅಂಶದಲ್ಲಿ ದತ್ತಾತ್ರೇಯನೂ ಜನಿಸಿದರಂತೆ.

ಅನಸೂಯೆ ತನ್ನ ಪಾತಿವ್ರತ್ಯಕ್ಕಾಗಿ ಲೋಕಪ್ರಸಿದ್ಧಿ ಪಡೆದಿದ್ದಳು. ಅದರಿಂದ ತ್ರಿಮೂರ್ತಿಗಳ ಮಡದಿಯರಾದ ಲಕ್ಷ್ಮಿ, ಸರಸ್ವತಿ ಮತ್ತು ಪಾರ್ವತಿಯವರಿಗೆ ಅಸೂಯೆಯುಂಟಾಯಿತು. ಅವರು ತಮ್ಮ ಗಂಡಂದಿರೊಂದಿಗೆ ಅನಸೂಯೆಯ ಪ್ರಸಿದ್ಧಿಯನ್ನುಕೆಡೆಸಿ ಬರಬೇಕೆಂದು ಹೇಳಿದರು. ತ್ರಿಮೂರ್ತಿಗಳು ಅದಕ್ಕೆ ಒಪ್ಪಿ ವೇಷ ಮರೆಸಿಕೊಂಡು ಅತ್ರಿಋಷಿ ಆಶ್ರಮದಲ್ಲಿ ಇಲ್ಲದ ಹೊತ್ತು ನೋಡಿ ಅವನ ಆಶ್ರಮಕ್ಕೆ ಬಂದು ಅನಸೂಯೆಯೊಂದಿಗೆ ಭೋಜನವನ್ನು ಬೇಡಿದರು.

ಅನಸೂಯೆ ಎಲೆಯಿಟ್ಟು ತ್ರಿಮೂರ್ತಿಗಳಿಗೆ ಭೋಜನ ಬಡಿಸಲು ಸಿದ್ಧಳಾದಳು. ಆಗ ಅವರು, "ಅಮ್ಮಾ, ನೀನು ಹೀಗೆ ಬಡಿಸಿದರೆ ನಾವು ಭೋಜನ ಸ್ವೀಕರಿಸಲಾರೆವು. ಬಡಿಸುವವರು ಬಟ್ಟೆಗಳನ್ನು ಕಳಚಿ ನಗ್ನರಾಗಿರಬೇಕೆಂದು ನಮ್ಮ ನಿಯಮವಿದೆ" ಎಂದರು.



ಹಾಗೆಯೇ ಆಗಲಿ ಎಂದು ಅನಸೂಯೆ ಕಮಂಡಲುವಿನ ನೀರನ್ನು ಮೂರು ಮೂರ್ತಿಗಳ ಮೇಲೆ ಚಿಮುಕಿಸಿದಳು. ಅವಳ ತಪೋ ಮಹಿಮೆಯಿಂದ ಅವರು ಚಿಕ್ಕ ಮಗುಗಳಾಗಿ ಬದಲಾಯಿಸಿದರು. ಅನಸೂಯೆ ಬೆತ್ತಲೆಯಾಗಿ ಆ ಶಿಶುಗಳಿಗೆ ಉಣಿಸಿ ತಿನ್ನಿಸಿ ತೊಟ್ಟಿಲಲ್ಲಿ ಮಲಗಿಸಿ ತೂಗಲಾರಂಭಿಸಿದಳು. ಮಕ್ಕಳು ಹಾಗೆಯೇ ನಿದ್ದೆ ಹೋದವು.

ಈ ವಿಚಾರ ತ್ರಿಮೂರ್ತಿಗಳ ಮಡದಿಯರಿಗೆ ತಿಳಿಯಿತು. ಅವರು ಗಾಬರಿಯಾಗಿ ಪತಿಭಿಕ್ಷೆ ಬೇಡಲು ಅನಸೂಯೆಯ ಬಳಿಗೆ ಬಂದರು. ಆಗ ಅನಸೂಯೆ ಬತ್ತ ಕುಟ್ಟುತ್ತಿದ್ದಳು. ದೇವಿಯರನ್ನು ನೋಡಿ ಅನಸೂಯೆ ಎತ್ತಿದ ಒನಕೆಯನ್ನು ಅಲ್ಲಿಯೇ ಕೈಬಿಟ್ಟಳು. ಆದರೂ ಒನಕೆ ಕೆಳಗೆ ಬೀಳದೆ ಅಲ್ಲಿಯೇ ನಿಂತಿತು. ಈ ವಿಸ್ಮಯವನ್ನು ಅವರು ನೋಡುತ್ತಾ ತಮಗಿಂತ ಅನಸೂಯೆಯ ಪಾತಿವ್ರತ್ಯ ಮಿಗಿಲಾದುದೆಂದು ಒಪ್ಪಿಕೊಂಡು ಅವಳಲ್ಲಿ ಪತಿ ಭಿಕ್ಷೆಯನ್ನು ಬೇಡಿದರು. ಅಷ್ಟರಲ್ಲಿ ಅತ್ರಿಮುನಿ ಆಶ್ರಮಕ್ಕೆ ಹಿಂತಿರುಗಿ ನಡೆದುದನ್ನು ಜ್ಞಾನದೃಷ್ಟಿಯಿಂದ ತಿಳಿದುಕೊಂಡು, ಎಲ್ಲರಿಗೂ ವಂದಿಸಿ ಧನ್ಯನಾದ.

ತ್ರಿಮೂರ್ತಿಗಳು ಒಂದಾಗಿ ಅನಸೂಯೆಯ ಗರ್ಭದಿಂದ ದತ್ತಾತ್ರೇಯನೆಂಬ ಹೆಸರಿನಿಂದ ಜನಿಸುವುದಾಗಿ ಆಗ ವರವಿತ್ತರು ಎಂದು ಇನ್ನೊಂದು ಕತೆ ಹೇಳುತ್ತದೆ.

ಒಂದು ಸಲ ಅತ್ರಿ ಋಷಿ ತಪಸ್ಸು ಕೈಗೊಂಡ. ಹಲವು ವರ್ಷಗಳ ಕಾಲ ಆತ ತಪಸ್ಸಿನಲ್ಲಿ ತಲ್ಲೀನನಾಗಿದ್ದಾಗ ಭೂ ಲೋಕದಲ್ಲಿ ಮಳೆ ಬಾರದೆ ಅನಾವೃಷ್ಟಿಯುಂಟಾಯಿತು. ಅನಸೂಯೆ ಉಸುಕಿನಿಂದ ಒಂದು ಪಾರ್ಥಿವ ಲಿಂಗವನ್ನು ತಯಾರಿಸಿ ಶಿವನನ್ನು ಪೂಜಿಸಲಾರಂಭಿಸಿದಳು. ಆಗ ಇದ್ದಕ್ಕಿದ್ದಂತೆಯೇ ಅತ್ರಿ ತಪಸ್ಸಿನಿಂದ ಎಚ್ಚೆತ್ತು ಅವಳೊಡನೆ ಕುಡಿಯಲು ನೀರು ಕೇಳಿದ. ಆ ಬರಗಾಲದಲ್ಲಿ ಎಲ್ಲಿಂದ ಬರಬೇಕು ನೀರು? ಚಿಂತೆಗೊಂಡಿದ್ದ ಅನಸೂಯೆಯೆದುರು ಗಂಗೆ ಪ್ರತ್ಯಕ್ಷಳಾಗಿ, "ಇಲ್ಲೇ ಒಂದು ರಂಧ್ರ ಕೊರೆ" ಎಂದಳು

ಗಂಗೆಯ ಮಾತಿನಂತೆ ಅನಸೂಯೆ ನೆಲದಲ್ಲಿ ಕೊರೆದ ರಂಧ್ರದಿಂದ ನೀರು ಚಿಮ್ಮಿತು. ಅನಸೂಯೆ ಸಂತೋಷದಿಂದ, "ಗಂಗಾದೇವಿ, ನೀನು ಒಂದು ತಿಂಗಳು ಇಲ್ಲೇ ನೆಲಸಿರಮ್ಮಾ" ಎಂದು ಪ್ರಾರ್ಥಿಸಿದಳು. "ಅದಕ್ಕೇನಂತೆ ನಿನ್ನ ಒಂದು ತಿಂಗಳ ಪುಣ್ಯವನ್ನು ನನಗೆ ಕೊಟ್ಟುಬಿಡಬೇಕು" ಎಂದು ಷರತ್ತು ಹಾಕಿದಳು ಗಂಗೆ. ಅನಸೂಯೆ ಒಪ್ಪಿಕೊಂಡಳು.

ಆ ನೀರನ್ನು ಅತ್ರಿಋಷಿ ಕುಡಿದು, "ಅನಸೂಯಾ, ಇದುವರೆಗೆ ಇಷ್ಟು ರುಚಿಯಾದ ನೀರನ್ನು ನಾನು ಕುಡಿದಿಲ್ಲ. ಇದು ಎಲ್ಲಿಂದ ಬಂತೇ? ಎಂದು ಕೇಳಿದ. ಆಕೆ ಸತ್ಯ ಸಂಗತಿಯನ್ನು ತಿಳಿಸಿದಾಗ ಅತ್ರಿಗೂ ಗಂಗೆಯನ್ನು ನೋಡಬೇಕೆಂಬ ಆಸೆಯಾಯಿತು. ಅವನ ಬಯಕೆಯಂತೆ ಗಂಗೆ ಕಾಣಿಸಿಕೊಂಡಳು. ಅವಳೊಂದಿಗೆ

ಅನಸೂಯೆ ಭೂಮಿಯಲ್ಲೇ ನೆಲೆಸಿರುವಂತೆ ಬೇಡಿಕೊಂಡಾಗ ಅವಳ ಒಂದು ವರುಷದ ಪುಣ್ಯವನ್ನು ತನಗೆ ಧಾರೆಯೆರೆಯುವುದಾದರೆ ತಾನು ಅಲ್ಲಿ ನೆಲೆ ನಿಲ್ಲುವುದಾಗಿ ಗಂಗೆ ನುಡಿದಳು.

ಗಂಗೆಯ ಈ ಷರತ್ತನ್ನೂ ಅನಸೂಯೆ ಒಪ್ಪಿಕೊಂಡಳು. ಆದರೆ ಆಕೆ ಪೂಜಿಸುತ್ತಿದ್ದ ಪಾರ್ಥಿವ ಲಿಂಗದಿಂದ ಶಿವನು ಪ್ರತ್ಯಕ್ಷನಾಗಿ, ಅಲ್ಲಿಯೇ ಗಂಗೆ ಸ್ಥಿರವಾಗಿ ನಿಲ್ಲುವಂತೆ ಅನುಗ್ರಹಿಸಿದ. ಆ ಸ್ಥಳ ಇಂದಿಗೂ ಅತ್ರೀಶ್ವರ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ಇನ್ನೊಂದು ಸಲ ಅನಸೂಯೆ ಅತ್ರಿಯೊಂದಿಗೆ ವೈಶ್ಯರಾಜನ ಬಳಿಗೆ ಹೋಗಿ ಸ್ವಲ್ಪ ಧನವನ್ನು ಕೇಳಿ ತರುವಂತೆ ತಿಳಿಸಿದಳು. ಅತ್ರಿಯು ರಾಜನ ಹತ್ತಿರ ಹೋಗಿ ಅವನನ್ನು ರಾಜಾಧಿರಾಜನೆಂದು ಸ್ತುತಿಸಿದ. ಅದನ್ನು ಕೇಳಿ ಅಲ್ಲಿದ್ದ ಗೌತಮ ಮುನಿ ಕುಪಿತನಾಗಿ, "ಅತ್ರಿ ಹಣಕ್ಕಾಗಿ ಇಷ್ಟೊಂದು ಕೀಳಾಗಬೇಡ. ರಾಜಾಧಿರಾಜ ಇಂದ್ರನೊಬ್ಬನೇ. ಈ ವೈಶ್ಯ ರಾಜನಿಗೆ ಹಾಗೆ ಕರೆಸಿಕೊಳ್ಳುವ ಯೋಗ್ಯತೆ ಇಲ್ಲ" ಎಂದನು.

ಅವರಿಬ್ಬರೂ ಸನತ್ಕುಮಾರನ ಬಳಿಗೆ ಹೋಗಿ ತಮ್ಮ ನ್ಯಾಯವನ್ನು ಪರಿಹರಿಸಲು ಹೇಳಿದಾಗ ಸನತ್ಕುಮಾರನು, "ಅತ್ರಿ ಹೇಳಿದ್ದರಲ್ಲಿ ತಪ್ಪಿಲ್ಲ. ವಿಷ್ಣುವಿನಂತೆ ಪ್ರಜೆಗಳನ್ನು ರಕ್ಷಿಸುವ ರಾಜನನ್ನು ಹಾಗೆ ಸಂಬೋಧಿಸಬಹುದು" ಎಂದ. ಅದರಿಂದ ರಾಜನಿಗೂ ಸಂತೋಷವಾಯಿತು. ಅವನು ಆತ್ರಿ ಮುನಿಗೆ ಬಯಸಿದಷ್ಟು ಹಣವನ್ನು ಕೊಟ್ಟ.

ಒಮ್ಮೆ ರಾಹು ಸೂರ್ಯ ಚಂದ್ರರಿಬ್ಬರಿಗೂ ಮುತ್ತಿಗೆ ಹಾಕಿ ಒಂದೇ ಸಲ ಅವರನ್ನು ನುಂಗಿದ. ಅದರಿಂದ ಲೋಕವಿಡೀ ಕತ್ತಲೆ ಆವರಿಸಿತು. ದೇವತೆಗಳು ಗಾಬರಿಯಾಗಿ ಅತ್ರಿಯ ಬಳಿಗೆ ಹೋಗಿ "ಮಹಾತ್ಮಾ ನೀನೇ ದಾರಿ ತೊರಿಸಬೇಕು" ಎಂದರು.

ಅತ್ರಿ ಅವರೊಂದಿಗೆ, "ನೀವೇನೂ ಹೆದರಬೇಡಿ" ಎಂದು ಧೈರ್ಯ ಹೇಳಿ ತನ್ನ ತಪೋಬಲದಿಂದ ತಾನೇ ಸೂರ್ಯ ಚಂದ್ರರಂತೆ ಲೋಕಕ್ಕೆ ಬೆಳಕು ಕೊಡಲಾರಂಭಿಸಿದನು. ಅಷ್ಟು ಹೊತ್ತಿಗೆ ದೇವತೆಗಳು ರಾಹುವನ್ನು ಸೋಲಿಸಿ, ಅವನ ಹೊಟ್ಟೆಯಿಂದ ಸೂರ್ಯ ಚಂದ್ರರನ್ನು ಬಿಡುಗಡೆ ಮಾಡಿಸಿದರು.

ಶ್ರೀರಾಮನು ವನವಾಸಕ್ಕೆ ತೆರಳಿದಾಗ ಸೀತಾಲಕ್ಷ್ಮಣರೊಂದಿಗೆ ಅತ್ರಿಯ ಆಶ್ರಮಕ್ಕೆ ಹೋಗಿದ್ದ. ಆಗ ಅನಸೂಯೆ ಸೀತೆಯನ್ನು ಒಡವೆ ವಸ್ತ್ರಗಳಿಂದ ಅಲಂಕರಿಸಿ, ನೋಡಿ ಮದುಮಗಳಂತೆ ಸಂತೋಷಪಟ್ಟ ಸುರಮ್ಯ ವರ್ಣನೆ ರಾಮಾಯಣದಲ್ಲಿದೆ.



# ಪರಿಚಿತ

(ಸಣ್ಣ ಕತೆ)

—ಎನ್. ಎಸ್. ಗದಗಕರ

ದಿನಪತ್ರಿಕೆಯೊಂದಕ್ಕೆ ಜಾಹೀರಾತನ್ನು ಬರೆದು ಮೂರ್ತಿ ವಿರಾಮಾಸನದಲ್ಲಿ ಒರಗಿದನು. ಆಗ ಲೀಲಾಜಾಲವಾಗಿ ಹಿಂದಿನ ಆರೇಳು ವರ್ಷಗಳ ನೆನಪಿನ ಮಾಲೆ ಮಿಂಚಿತು.

ಮೂರ್ತಿಯ ಚಿಕ್ಕ ಮಗು ಲಲಿತೆ ಅದೇ ಶಾಲೆಯಿಂದ ತಡವಾಗಿ ಬಂದಿದ್ದಳು. ಈ ಮಗು ಹುಟ್ಟುವ ಮೊದಲು ತಾಯಿ ಎಷ್ಟು ದೇವರು ದಿಂಡರಿಗೆ ನಡೆದುಕೊಂಡಿದ್ದಳೊ! ಹತ್ತು ವರ್ಷ ಕಳೆದರೂ ದೇವರು ಮೊರೆ ಕೇಳಿರಲಿಲ್ಲ. ಕೊನೆಗೊಮ್ಮೆ ಆಕೆಗೆ ಇಪ್ಪತ್ತೇಳು ವರ್ಷ ಇರುವಾಗ ಲಲಿತೆಯ ಜನನವಾಯ್ತು. ಹೆರಿಗೆಯ ಗೋಳು ಹೇಳತೀರದು. ದೈವದುರ್ವಿಪಾಕದಿಂದ ತಾಯಿ, ಮಗಳ ವಿವಾಹ ಕಾಣುವ ಯೋಗ ಇದ್ದಂತೆ ಕಾಣಲಿಲ್ಲ. ಅದೇ ಲಲಿತೆಗೆ ಇನ್ನೂ ಮೂರು ವರ್ಷ ನಡೆದಿರುವಾಗಲೇ ಆಕೆ ಕಣ್ಣು ಮುಚ್ಚಿದಳು.

ಮೂರ್ತಿಯ ಮಡದಿ ತೀರಿ ಇಂದಿಗೆ ಸುಮಾರು ಐದು ವರ್ಷ ಕಳೆದಿದ್ದಾವು. ಅವನು ಮುಂದೆ ಲಗ್ನವಾಗದಿದ್ದುದು ಎಲ್ಲರಿಗೂ ಅಚ್ಚರಿಯನ್ನುಂಟುಮಾಡಿತು. ಅವನಿಗೆ ಆಸ್ತಿಯ ಕೊರತೆ ಇರಲಿಲ್ಲ. ಮೇಲಾಗಿ ಸರಕಾರಿ ನೌಕರಿ. ನಿಜವಾದ ಸಂಗತಿಯೆಂದರೆ ಮೂರ್ತಿಗೆ ಮೊದಲಿನ ಮಡದಿಯ ಬಗೆಗೆ ವಿಶೇಷ ಆದರವಿದ್ದಿತು. ಕಾಲಕ್ರಮದಲ್ಲಿ ಮಗಳ ಬೆಳವಣಿಗೆಯಲ್ಲಿಯೇ ಮನಸ್ಸು ಹಾಕಿದ. ಮಲತಾಯಿಯನ್ನು ತಂದು ಮನೆಯ ನೆಮ್ಮದಿಯನ್ನು ಕೆಡಿಸಬಾರದೆಂದು ಅವನ ಎಣಿಕೆ ಇದ್ದಿತು.

ಏಳು ವರ್ಷಗಳಾಗುವವರೆಗೆ ಹೇಗೋ ಅವನು ಲಲಿತೆಯನ್ನು ಬೆಳೆಸಿದ. ಇನ್ನು ಮುಂದೆ ಏಕೊ ಅವನ ಕೈ ಕಟ್ಟಿದಂತೆ ಎನಿಸಿತು. ಲಲಿತೆಯ ಚಿಕಿತ್ಸಕ ಬುದ್ಧಿ ದಿನಗಳೆದಂತೆ ಕುಶಾಗ್ರವಾಗುತ್ತ ನಡೆಯಿತು. ಗಂಡಸರಿಗೆ ಸಹಜವಾಗಿ ಹೇಳಲಾಗದ ಉತ್ತರಗಳನ್ನಾಕೆ ಅಪೇಕ್ಷಿಸುವಂತೆ ತೋರುತ್ತಿತ್ತು. ಇನ್ನು ಮುಂದೆ ಒಂದು ಹೆಣ್ಣು ಜೀವ ಬಂದು ನೋಡಿಕೊಳ್ಳದೆ ಗತ್ಯಂತರವಿಲ್ಲ ಎಂದು ಅವನಿಗೆ ಅನ್ನಿಸತೊಡಗಿತು. ಮತ್ತೊಮ್ಮೆ ಲಗ್ನವಾಗುವ ಯೋಚನೆಯನ್ನು ಅವನು ಬಿಟ್ಟುಕೊಟ್ಟಂತಾಗಿತ್ತು. ಅದು ಅನರ್ಥಕಾರಕ ಎಂದು ಅವನು ಗ್ರಹಿಸಿದ.

ಜಾಹೀರಾತು ಕೊಟ್ಟ ಉದ್ದೇಶವೇ ಅದು. ಜಾಹೀರಾತು ಕೊಟ್ಟ ಮರುದಿನ, ಅದು ಪ್ರಕಟವಾಗಿ; ಮರುದಿನ ಮುಂಜಾವು ಅದಕ್ಕೆ ಉತ್ತರ ರೂಪವಾಗಿ

ಸಂದರ್ಶಕಳೊಬ್ಬಳು ಬಂದಳು. ಹೆಸರು ಪ್ರಮೀಳೆ. ಬಿ. ಎ. ಆದವಳು. ಕಾರ್ಡಿನಲ್ಲಿಯ ಹೆಸರು ಓದುವಾಗಲೆ ಪೂರ್ವ ಪರಿಚಯ ಕೊಂಚ ಮಿಂಚು ಹೊಡೆಯಿತು. ಮೂರ್ತಿ ವಿಶೇಷ ಮನಸ್ಸು ಓಡಿಸಲಿಲ್ಲ.

ಆಳು ಮನುಷ್ಯ ಪ್ರಮೀಳೆಯನ್ನು ಒಳಗೆ ಕರೆತಂದ. ಮೂರ್ತಿಯು ಮೊದಲ ಮಡದಿಗೂ ಈಕೆಗೂ ಅಜಗಜಾಂತರ ಇದ್ದಿತು. ಆದರೆ ಸೌಂದರ್ಯಕ್ಕೆ ಹೆಸರಿಡುವಂತೆ ಇರಲಿಲ್ಲ. ಚಿಂತಾಕ್ರಾಂತ ಮುಖ ಮುದ್ರೆಯ ಮೂಲಕ ಅಪೂರ್ವ ಕಳೆ ಇದ್ದಿತು. ವಯಸ್ಸು ಇಪ್ಪತ್ತೈದು ಮೀರಿದಂತಿರಲಿಲ್ಲ. ಕ್ಷಣಕಾಲ ಪರಸ್ಪರ ನಿರೀಕ್ಷಿಸಿದರು.

ಮೂರ್ತಿ ಥಟ್ಟನೆ ನುಡಿದ-"ಪ್ರಮೀಳಾದೇವಿ ಕುಳಿತುಕೊಳ್ರಿ; ತಾವು ನಾ ಕೊಟ್ಟ ಜಾಹೀರಾತು ಓದಿಕೊಂಡು ಬಂದ್ಹಾಂಗ ಕಾಣಿಸ್ತದ. ನಾ ಏನೊ ವಿಧವಾ ಇದ್ದಿರ ನಡೀತದ ಅಂತಿದ್ದೆ. ಆದರ ನೀವು ಬಂದ ಔಚಿತ್ಯ ಹೋಳೀಲಿಲ್ಲ?"

"ನನಗ ಮಕ್ಕಳಂದರ ಪಂಚಪ್ರಾಣ. ಅದಕ್ಕಾs ಬಂದೇನಿ ಅವಿವಾಹಿತ ಇದ್ದರ ಒಪ್ಪಿಗಿ ಇಲ್ಲ ಏನು?".

ಪ್ರಮೀಳಾ ದಿಟ್ಟಳೆಂಬುದು ಈ ಕೆಲವೇ ಶಬ್ದಗಳಲ್ಲಿ ಮೂರ್ತಿಗೆ ಹೊಳೆಯಿತು. ಆ ಜಾಣತನಕ್ಕೂ ಮನಸ್ಸಿನಲ್ಲಿಯೇ ತಲೆದೂಗಿದ.

ಮೂರ್ತಿಗೆ ಹೆಂಗಳೆಯರೊಡನೆ ವ್ಯವಹರಿಸುವುದು ಅಪರಿಚಿತ ಇರಲಿಲ್ಲ. ಆಫೀಸಿನಲ್ಲಿ ಅವನ ಕೈಕೆಳಗೆ ಅನೇಕ ವಿವಾಹಿತ, ಅವಿವಾಹಿತ ಮಹಿಳೆಯರಿದ್ದರು. ಅವರ ಜೀವನದ ಪರಿಛಿತ ಅವನಿಗೆ ಅಪರೂಪ ಇರಲಿಲ್ಲ. ಏನಿದ್ದರೂ ಪ್ರಮೀಳೆಯ ಕಟ್ಟು ನಿಟ್ಟಾದ ಉತ್ತರಕ್ಕೆ ಮೂರ್ತಿ ಕ್ಷಣ ಕಾಲ ಅವಾಕ್ಕಾದ. ತನ್ನ ಮನದ ದುಗುಡ ಹೊರದೋರದೆ ನುಡಿದ-"ಛೆ ಹಾಗೇನಿಲ್ಲ. ಅವಿವಾಹಿತರ ಬಗ್ಗೆ ನನಗ ತಿರಸ್ಕಾರ ಇಲ್ಲ. ಮುಖ್ಯ ನಮ್ಮ ಅನಾಥ ಹುಡುಗೆಯ ಲಾಲನೆ ಪೋಷಣೆ ನೋಡಿದರಾತು".

"ಹಾಗಿದ್ದರ ಪರವಾ ಇಲ್ಲ. ನಾ ನಿಮ್ಮ ಮಗಳಿಗೆ ತಾಯಿ ಇದ್ದಾಂಗs. ವಿಧವೆಗೂ ನನಗೂ ಬಹಳ ಅಂತರ ಇಲ್ಲ".

"ಹಾಗಂದರೇನು"?

"ನಾ ಒಬ್ಬರನ್ನ ಲಗ್ನ ಆಗಬೇಕಂತಿದ್ದೆ. ಸಾಧ್ಯ ಆಗಲಿಲ್ಲ. ಅಥವಾ ನನ್ನ ಒಬ್ಬವಾ ಲಗ್ನ ಆಗೋವಾ ಇದ್ದ ತಪ್ಪಿದ".



ಮೂರ್ತಿಗೆ ಈ ಮಾತಿನ ಮೋಡಿ ಹೊಳೆಯಲಿಲ್ಲ. ಸುಮ್ಮನೆ ಕೌಲೆತ್ತಿನಂತೆ ಕತ್ತು ಅಡಿಸಿದ. ಹಾಗೇ ಕೆಲವು ಮಾತು ಹೇಳಿದ–

"ನಾ ಒಬ್ಬ ವಿಧುರ. ಹೆಂಡತಿ ಸತ್ತು ಐದು ವರ್ಷ ಆಗಿದ್ದಾವು. ಈಗ ಮನ್ಯಾಗ ಇದ್ದಾಕಿ ಅಂದರ ವೃದ್ಧ ಅಡಿಗಿ ಆಕೆ, ಒಬ್ಬ ಆಳು ಮನುಷ್ಯ, ಒಬ್ಬ ತೋಟಿಗ, ಕಡೀಕ ಡ್ರೈವರ. ಹೆಂಡತಿ ಸತ್ತಂದಿನಿಂದ ಇಲ್ಲಿಯತನಕಾ ಅಂದರ, ಮೂರು ಮಂದಿ ಹೆಣ್ಣು ಮಕ್ಕಳು ಬಂದು ಹೋದರು-ಮಗುವಿನ ಲಾಲನೆ ಪಾಲನಾಕ್ಕಂತ. ಆಗ ಅವರು ಒಂದಿಲ್ಲೊಂದು ನಿಮಿತ್ತದಿಂದ ನನ್ನ ಲಗ್ನದ ಪ್ರಸ್ತಾಪ ಎತ್ತುತ್ತಿದ್ದರು.

"ಅಂದರ, ನಾನೂ ಹೀಂಗ ಹೇಳಬಾರದೂ ಅಂತ ನಿಮ್ಮ ಆಶಯ. ಏನು ? ಒಳ್ಳೇದು ನಿಶ್ಚಿತವಾಗೀನೂ ನಾ ಆ ವಿಷಯ ಎತ್ತೊದಿಲ್ಲ, ಆತಿಲ್ಲೊ! . ನಾ ಏನೊ, ನಿಮ್ಮ ಹುಡುಗಿ ಏನೊ-ಹಾಂಗ ಇದ್ದು ಬಿಡತೇನಿ. ನನಗೇನು ಅನ್ಯರ ಲಗ್ನದ ಹವ್ಯಾಸ ಇಲ್ಲ. ನಂದಂತೂ ಎಂದೋ ತೀರೇದ! "

ಪ್ರಮೀಳೆ ಕಾಲ ಕ್ರಮದಲ್ಲಿ ಮನೆತನದ ರೂಢಿಗೆ ಹೊಂದಿಕೊಂಡಳು. ಮಗು ಕೂಡ ಅವರಿಬ್ಬರ ಮಾತು ಕತೆಯಲ್ಲಿ ಲೀನವಾಗಿ ನಗುತ್ತ ಕಲೆಯುತ್ತ ನಡೆದಿತ್ತು. ಹೀಗೆ ಸುಖಮಯವಾಗಿ ಮೂವರ ಬಾಳ ನೌಕೆ ಪ್ರಶಾಂತ ಸಾಗರದ ಅಲೆಗಳ ಮಧ್ಯದಲ್ಲಿ ಹಾಯ್ದು ಲೀಲಾಜಾಲವಾಗಿ ಸಾಗಿದ್ದಿತು.

ಅದೊಂದು ಆಲ್ಹಾದಕರ ಇರುಳು. ಪೂರ್ವದಿಗಂತದಲ್ಲಿ ಚಂದಿರ ಅಂದವಾಗಿ ಸಾಗಿದ್ದ. ಮೂರ್ತಿ ಒಂದು ಚಹಾ ಪಾರ್ಟಿಗೆ ಹೋಗಿ ಮರಳುತ್ತಿದ್ದ. ಇಂದು ದಿನದ ಕಿಂತ ತಡವೇ ಆಗಿದ್ದಿತು. ದೂರಿನಿಂದಲೆ ಕಾರಿನ ಬೆಳಕಿನಲ್ಲಿ ಅವನಿಗೆ ಬಂಗ್ಲೆಯ ಮುಂಬದಿಯಲ್ಲಿ ಪ್ರಮೀಳೆ ಕುಳಿತುದು ಕಾಣಿಸಿತು. ತೊಡೆಯಮೇಲೆ ಲಲಿತ ಬಾಗಿದ್ದಳು. ಸ್ವಲ್ಪ ಸೂಕ್ಷ್ಮವಾಗಿ ನಿರುಕಿಸಿದರೆ, ಇದೀಗ ಆಕೆ ದುಃಖಿಸಿದಂತೆ ಕಣ್ಣು ತೇವೆ ಆಗಿದ್ದವು.

ಮೂರ್ತಿ ಆಕೆಯ ಬಳಿ ಕುಳಿತು ನುಡಿದ— ದುಃಖವಾಗಿದ್ದಲೆ ಒಮ್ಮೆ ಕಣ್ಣೀರಿಟ್ಟು ಅತ್ತು ಬಿಡುವುದೇಯುಕ್ತ, ಅದರಿಂದ ಮನಸ್ಸಿಗೆ ನೆಮ್ಮದಿ ಅನಿಸೀತು.

"ಆ ದುಃಖವನು ಏನು ಬಿಟ್ಟದ್ದಲ್ಲ ಇದ್ದದ್ದs !" "ಸಾಧ್ಯವಿದ್ದರೆ ಕಾರಣ ಹೇಳಬಹುದು "

ಆಕೆಯ ಹೇಳಿಕೆಯ ಮೇರೆಗೆ ಒಬ್ಬ ಎಂಜಿನಿಯರನೊಡನೆ ಲಗ್ನದ ಪ್ರಸ್ತಾಪ ಹೊರಟಿತ್ತಂತೆ. ಅದು ಹಿಂದಿನ ಮಾತು. ಆದರೆ ಅಕಸ್ಮಾತ್ತಾಗಿ ವ್ಯವಹಾರದಲ್ಲಿ

ಹಾನಿ ಆಗಿ ಅವನು ಪ್ರಮೀಳೆಯ ಕೈಬಿಟ್ಟ. ಆ ಗುಂಗುರುಕೂದಲು, ವಿಶಾಲವಾದ ಹಣೆ, ಮಂದಹಾಸ ಸೂಸುವ ನಿಡಿದಾದ ಕಣ್ಣುಗಳು –ಎಲ್ಲ ಮರೆಯಲಾರೆ ಅಂದಳು.

“ನಿನ್ನಂತಹವಳಗೆ ಮೋಸ ಮಾಡುವ ಅವ ಪೆದ್ದನೇ ಸೈ ಪ್ರಮೀಳಾ, ಇನ್ನ ನೀ ಅವನ್ನ ಮರೆತುಬಿಡೋದಾ ನೆಟ್ಟಗ. ಚಂಚಲ ಸ್ವಭಾವದ ಅವಗ ನೀ ಮಾರು ಹೋಗಿದ್ದದ್ದೇ ತಪ್ಪು ! ”

ಆ ಇರುಳು ಮೂರ್ತಿಗೆ ಗಾಢ ನಿದ್ರೆ ಆವರಿಸಲಿಲ್ಲ. ಪ್ರಮೀಳೆ ಬಣ್ಣಿಸಿದ ವ್ಯಕ್ತಿಯನ್ನು ನೆನಪು ಮಾಡಿಕೊಳ್ಳಲು ಹವಣಿಸಿದ. ಮುಖ ಲಕ್ಷಣ ನೋಡಲು ಅವ ತಮ್ಮ ಆಫೀಸಿನಲ್ಲಿಯ ಎಂಜಿನಿಯರ ಮಧುಕರ ಎಂದು ಥಟ್ಟನೆ ಹೊಳೆಯಿತು. ಈಗ ಎರಡು ವರ್ಷಗಳ ಹಿಂದೆಯೇ ಹಣದ ನೆಪದಿಂದ ಅವನು ಮದುವೆಯನ್ನು ಮುರುಗಡೆ ಮಾಡಿಕೊಂಡದ್ದು ಆಫೀಸಿನಲ್ಲಿ ಎಲ್ಲರ ಬಾಯಿಯಲ್ಲಿ ಇದ್ದಿತು.

ಆಗ ಮೂರ್ತಿಗೆ ಒಂದು ವಿಚಾರ ಹೊಳೆಯಿತು. ಸಾಧ್ಯವಾದಲ್ಲಿ ಪ್ರಮೀಳೆ ಮಧುಕರರನ್ನು ಏಕೆ ಕೂಡಿಸಬಾರದು ? ಆ ಬಾಳು ಸುಖಮಯ ಆದರೆ ಒಳಿತು ಅನಿಸಿತು. ನಿದ್ರೆ ಹೋದ.

ಮರುದಿನ ಆಫೀಸಿಗೆ ಹೋದೊಡನೆಯೇ ಮಧುಕರನಿಗೊಂದು ಕಾಗದ ಬರೆದ. ತಮ್ಮ ಬಂಗ್ಲೆಯನ್ನು ವಿಸ್ತರಿಸುವದಿದೆ. ಸಲಹೆ ಕೇಳಬೇಕಾಗಿದೆ. ಐದು ಗಂಟೆಗೆ ತಮ್ಮಲ್ಲಿ ಚಹಕ್ಕೆ ಬರಬೇಕೆಂದು ಅಲ್ಲಿ ನಿವೇದಿತವಾಗಿದ್ದಿತು. ಮಧುಕರನೂ ಆ ಆಹ್ವಾನವನ್ನು ಸ್ವೀಕರಿಸಿದನು.

ನಿಜವಾಗಿ ನೋಡಿದರೆ, ಮೂರ್ತಿಗೆ ಮಧುಕರನೊಡನೆ ಸಲುಗೆ ಬೆಳೆಸುವ ಇಚ್ಛೆ ಇರಲಿಲ್ಲ. ಅಂತೇ ತನಗೆ ಆಫೀಸಿನಲ್ಲಿ ಕೆಲಸವಿದೆ ; ಬರುವದಾಗುವದಿಲ್ಲ ಎಂದು ನಾಲ್ಕಕ್ಕೇ ಫೋನ್ ಮಾಡಿದ. ತನ್ನ ಗೆಳೆಯನೊಬ್ಬ ಐದಕ್ಕೆ ಬರುವ. ಅವನ ಚಹದ ಉಪಹಾರದ ಏರ್ಪಾಟು ಮಾಡಿ ಆದರಿಸಬೇಕೆಂದು ತಿಳಿಸಿದ ಪ್ರಮೀಳೆಗೆ.

ಆರೂವರೆಗೆ ಮೂರ್ತಿ ಮನೆಗೆ ಬಂದಾಗ ಮಗಳು ಲಲಿತೆ ಹಗ್ಗದಾಟದಲ್ಲಿ ಮಗ್ನಳಾಗಿದ್ದಳು. ಪ್ರಮೀಳಾ ಕಾದಂಬರಿ ಹಿಡಿದುಕೊಂಡು ಕುಳಿತಿದ್ದಳು, ಹಿಂದಿನ ಉದ್ವಿಗ್ನತೆ ಮೊಗದ ಮೇಲೆ ಕಾಣಲಿಲ್ಲ. ಅಲೌಕಿಕ ಕಾಂತಿ ಆವರಿಸಿದ್ದಿತು, ಮೂರ್ತಿ ತಪ್ಪಿತಸ್ಥನಂತೆ ನೋಡುತ್ತಾ ಕೊಠಡಿಯಲ್ಲಿ ಕಾಲಿಟ್ಟ.

ಮುಖ ತೊಳೆದುಕೊಂಡು ಒಳಗೆ ಬಂದಾಗ ಪ್ರಮೀಳೆ ಉತ್ಸಾಹದಿಂದ ಒಂದು ಭಾವಗೀತೆಯನ್ನು ಗುಣುಗುಣಿಸುತ್ತಿದ್ದಳು.. ಆಕೆಯ ಎದುರು ಕುಳಿತು ಕೇಳಿದ.



“ಏನು! ಇವತ್ತು ದಿನದಕ್ಕಿಂತ ಉತ್ಸಾಹ ಹೆಚ್ಚು ಕಾಣಸ್ತದ! ರಾಜಕುಮಾರನ್ನ ವರಿಸೊ ಹವ್ಯಾಸ ಏನು ಮತ್ತs !”

“ಛೆ ! ಅವನಕಿಂತ ಹೆಚ್ಚಿನವನ್ನ ! ನನ್ನ ಪ್ರಣಯದ ಪ್ರಶ್ನೆ ಬಗೀಹರೀತು.”

ಮೂರ್ತಿ ತಾನು ಕೊಂಚ ಉದ್ದ ನೀರಿಗೆ ಹೋದುದಕ್ಕೆ ನಾಚಿದ.

“ನೀವು ಯೋಜನಾದಾಗ ಜಾಣರಲ್ಲ? ನನಗ ಹೇಳದೆ ಕೇಳದೆ ನೀವು ಆ ಮಧುಕರನ್ನ-ನನ್ನ ಕಡೆ ಅಟ್ಟಿದಿರಿ. ಆದರೇನು ? ಏನೂ ಅನಾಹುತ ಆಗಲಿಲ್ಲ.”

“ಅಂದರ ನಿಮ್ಮ ವಿವಾಹದ ನಿಮಿತ್ತ ನನ್ನ ಅಭಿನಂದನಾ ಸ್ವೀಕರಿಸ್ತಿರೇನು ?”

“ಅದೇನು ಅವಶ್ಯ ಇಲ್ಲ !”

“ಹಾಂಗಾದರ, ಉತ್ಸಾಹದ ಕಾರಣ ತಿಳೀಲಿಲ್ಲ !”

“ನನ್ನ ಪ್ರಣಯದ ಪ್ರಶ್ನೆ ಬಿಚ್ಚಿತು. ಅದರಾಗ ಮಧುಕರನ ಸಂಬಂಧ ಇಲ್ಲ.”

ಮೂರ್ತಿ ಕೇಳಿ ವಿಸ್ಮಯಾವಿಷ್ಟನಾದನು.

“ಮಧುಕರ ಇಲ್ಲಿಗೆ ಯಂತ್ರದ್ಹಂಗ ಐದಕ್ಕ ಬಂದ. ಅರ್ಧಕಪ್ಪು ಚಹ ವಿಷ ಕುಡಿದ್ಹಾಂಗ ಗುಟಕರಿಸಿದ. ಉಪಹಾರದ ತಟ್ಟೆಗೆ ಕೈಹಚ್ಚಲಿಲ್ಲ, ನಾ ಹ್ಯಾಂಗ ಬದುಕಿದೆ ಇಷ್ಟು ದಿನ ಅಂತ ವಿಚಾರಿಸಲಿಲ್ಲ.”

ಮಧುಕರನೊಡನೆ ಪ್ರಣಯ ಸಾಧಿಸದಿದ್ದರೆ ಆ ಇನ್ನೊಂದು ವ್ಯಕ್ತಿ ಯಾರು ? ಮೂರ್ತಿಗೆ ನಿಗೂಢ ಎನಿಸಿತು.

“ಈ ಗಂಡಸರ ಮನಶ್ಚಾಂಚಲ್ಯನs ಅಂಥಾದು ! ಕೆಲವು ತಿಂಗಳ ನಾ ಮಧುಕರನ್ನ ಪ್ರೀತಿಸಿದ್ದೇನೋ ನಿಜ. ಆದರ ಅಷ್ಟಕ್ಕs ಅವ ಉಬ್ಬಿ ಬಲೂನು ಆಗಿನಾ ಗತಿಗೆಟ್ಟಾಕಿ ಅಂತ ಹಣದ ನೆವದಲೆ ತುಚ್ಛ ಮಾಡಿದ. ಆದರ ಆ ಇನ್ನೊಂದು ವ್ಯಕ್ತಿ ನನ್ನನ್ನು ಮುಂದ ವರಿಸಲಿಕ್ಕೆ ಧೈರ್ಯ ತೋರಿಸಲಿಲ್ಲ. ಈಗ ಪರಿಹಾರ ಸೂಚಿಸಲಿಕ್ಕೆ ಮುಂದ ಬಂದದ !

ವಸ್ತು ಸ್ಥಿತಿಯ ಅರಿವು ಉಂಟಾಗಲು ಮೂರ್ತಿಗೆ ತಡಹಿಡಿಯಲಿಲ್ಲ. ತನ್ನ ತಪ್ಪು ಹೊಳೆದು ಪ್ರಮೀಳೆಯ ಕ್ಷಮೆ ಕೋರಿದ.

ಹಗ್ಗದ ಆಟದಲ್ಲಿ ಎರಡು ಸುತ್ತು ವಿಜಯ ಸಂಪಾದಿಸಿದ ಲಲಿತೆ ಅಭಿಮಾನ ದಿಂದ ಬಳಿಗೆ ಬಂದಾಗ ತನ್ನ ತಂದೆ, ಸಾಕು ತಾಯಿ ಈರ್ವರೂ ತೀರ ಹತ್ತಿರ ಕುಳಿತುದು ಕಂಡಳು. ತಾನೂ ಅವರ ಪ್ರೇಮಾಲಾಪದಲ್ಲಿ ಒಂದಾದಳು !.

# ಅದ್ಭುತ ಬಾಲ ಪ್ರತಿಭಾನ್ವಿತರು

—ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

ಎಳೆ ವಯಸ್ಸಿನಲ್ಲೇ ಪ್ರೌಢ ಪ್ರಭಾವವನ್ನೂ, ಪ್ರತಿಭೆಯನ್ನೂ ಪ್ರದರ್ಶಿಸುವ ಶಿಶುಗಳು ನಿಸರ್ಗದ ಒಂದು ವೈಚಿತ್ರ್ಯ. ಅಪೂರ್ವ ಸಾಮರ್ಥ್ಯದ "ಅರ್ಲ್ ಆಫ್ ಲೆನಾಕ್" ಎಂಬಾತ 1588ರಲ್ಲಿ 14ನೇ ವರ್ಷ ವಯಸ್ಸಿನಲ್ಲೇ ಸ್ಕಾಟ್ಲೆಂಡ್ ದೇಶದ ಪ್ರಧಾನ ಮಂತ್ರಿ ಪದವಿಗೆ ಬಂದ! ವಿಸ್ಮಯ ಶಿಶುವೆಂದು ಗಣಿಸಲ್ಪಟ್ಟ ಫಿಲಿಫ್ ಬಾರಟೆಯರ್ ಎಂಬ ಪ್ರತಿಭಾನ್ವಿತ ಮಗುವಿಗೆ ಪ್ರಚಂಡ ಬುದ್ಧಿಬಲವೂ, ಜ್ಞಾಪಕ ಶಕ್ತಿಯೂ ಇದ್ದವು. ತನ್ನ ತಂದೆ ಹೊರತು ಬೇರೆ ಯಾವ ಬೋಧಕರಿಲ್ಲದಿದ್ದರೂ ಅವನು ಅಂತಃಶಕ್ತಿಯಿಂದ ತನ್ನ ನಾಲ್ಕನೆ ವಯಸ್ಸಿನಲ್ಲಿ ಜರ್ಮನ್ ಫ್ರೆಂಚ್ ಮತ್ತು ಲ್ಯಾಟಿನ್ ಭಾಷೆಗಳನ್ನು ಕಲಿತ. 7ನೇ ವಯಸ್ಸಿನಲ್ಲಿ ಗ್ರೀಕ್ ಭಾಷೆಯಲ್ಲಿದ್ದ ಬೈಬಲ್ ಗ್ರಂಥವನ್ನು ಭಾಷಾಂತರ ಮಾಡಿದ. ಹೀಬ್ರು ಭಾಷೆ ಕಲಿತು ಏಳನೆ ವಯಸ್ಸಿಗೆ ಮೊದಲೇ ಹೀಬ್ರು ಮೂಲಗ್ರಂಥದ ಶ್ಲೋಕಗಳನ್ನು ಬಾಯಿಪಾಠ ಮಾಡಿದ್ದ. ಒಂಭತ್ತರಲ್ಲಿ ಅಪೂರ್ವ ಹೀಬ್ರು ಶಬ್ದ ನಿಘಂಟನ್ನು ಬರೆದ. 14ನೇ ವಯಸ್ಸಿನಲ್ಲಿ ಹೇಲ್ ವಿಶ್ವವಿದ್ಯಾನಿಲಯದ, ಮಾಸ್ಟರ್ ಪದವಿ ಪಡೆದು, ಧರ್ಮ ವ್ಯವಸ್ಥಾಪಕ ಸಂಘದ ಸದಸ್ಯನಾಗಿ ಡಾಕ್ಟರೇಟ್ ಪದವಿಯನ್ನು ಗಳಿಸಿ ಬರ್ಲಿನ್ ಪಟ್ಟಣದ ರಾಯಲ್ ಅಕಾಡೆಮಿಯ ಸದಸ್ಯನಾದ. 19ರಲ್ಲಿ ತನ್ನ ಬುದ್ಧಿಶಕ್ತಿಯ ಉತ್ಕಟ ಪ್ರಯಾಸಕ್ಕೆ ಆಹುತಿಯಾಗಿ ಇಹಲೋಕವನ್ನು ಬಿಟ್ಟ.

ಫ್ರೆಂಚ್ ತತ್ತ್ವಜ್ಞಾನಿ ಮತ್ತು ಗಣಿತಜ್ಞ ಪ್ಯಾಸ್‌ಕಲ್ ಚಿಕ್ಕವನಾಗಿದ್ದಾಗಲೇ ವಿಜ್ಞಾನದಲ್ಲಿ ಮಹಾ ಪ್ರತಿಭೆಯನ್ನು ಪಡೆದಿದ್ದ. ಅವನ ತಂದೆ ಮಗನನ್ನು ಐದನೆ ವಯಸ್ಸಿನಿಂದಲೇ ಸುಶಿಕ್ಷಿತನನ್ನಾಗಿ ಮಾಡಲು ತನ್ನ ಕಾಲವನ್ನೆಲ್ಲಾ ವಿನಿಯೋಗಿಸಲು ರಾಜಸ್ಥಾನದಲ್ಲಿದ್ದ ತನ್ನ ಉದ್ಯೋಗವನ್ನು ತೊರೆದ. ಪ್ಯಾಸ್‌ಕಲ್ ತನ್ನ 12ನೇ ವಯಸ್ಸಿನಲ್ಲಿ ಧ್ವನಿಗತಿಶಾಸ್ತ್ರದ ಮೇಲೆ ಒಂದು ಪ್ರಬಂಧವನ್ನು ಬರೆದು, ಜಮಾ ಖರ್ಚನ್ನು ತೋರಿಸುವ ಪೃಥ್ವಿಯ ಪ್ರಪ್ರಥಮ ಯಂತ್ರವನ್ನು ನಿರ್ಮಿಸಿದ. ಯೂಕ್ಲಿಡ್‌ನ ರೇಖಾಗಣಿತ ಪುಸ್ತಕವನ್ನು ಕಂಡಿರದಿದ್ದರೂ ಅದರೊಳಗಿನ ಅನೇಕ ಸೂತ್ರಗಳನ್ನು ತಾನೇ ಕಂಡುಹಿಡಿದ. 16ನೇ ವಯಸ್ಸಿನಲ್ಲಿ ಅವನು ಎಷ್ಟು ಕಟುವಾದ ಗಹನ ಗ್ರಂಥವನ್ನು ರಚಿಸಿದನೆಂದರೆ, ಹಿರಿಯ ಜ್ಞಾನಿಗಳು ಅದನ್ನು ಯಾರೋ ವೃದ್ಧ, ಪ್ರೌಢ ವಿದ್ವಾಂಸರು ರಚಿಸಿರಬೇಕೆಂದು ಶಂಕಿಸಿದರು.



ಸ್ಕಾಟ್ಲೆಂಡ್‌ನಲ್ಲಿ 1560ನೇ ಇಸವಿಯಲ್ಲಿ ಹುಟ್ಟಿದ ಜೇಮ್ಸ್ ಕ್ರೇಚ್‌ಟನ್ ಬಾಲ್ಯದಲ್ಲೇ ಅದ್ವಿತೀಯ ವಿದ್ವಾಂಸನಾಗಿದ್ದ. ಇನ್ನೂ ಶಾಲೆಯ ಹುಡುಗನಾಗಿದ್ದಾಗಲೇ ಅವನು ಗ್ರೀಕ್, ಅರಬ್ಬಿ, ಫ್ಲೆಮಿಷ್, ಹೀಬ್ರು, ಸ್ಲಾವಾನಿಕ್, ಜರ್ಮನ್, ಫ್ರೆಂಚ್ ಮೊದಲಾದ 12 ಭಾಷೆಗಳಲ್ಲಿ ಅಡೆತಡೆಯಿಲ್ಲದೆ ವ್ಯಾಖ್ಯಾನ ಮಾಡುತ್ತಾ ಪ್ರಾಧ್ಯಾಪಕರೊಡನೆ ಪ್ರಬಂಧಗಳನ್ನು ಸಂಪಾದನ ಮಾಡುತ್ತಿದ್ದ. 20ನೇ ವಯಸ್ಸಿನ ಹೊತ್ತಿಗೆ ಆಗಿನ ಕಾಲದ ಸರ್ವವಿಜ್ಞಾನ ಶಾಲೆಗಳಲ್ಲೆಲ್ಲಾ ನಿಪುಣನಾಗಿ ಪದ್ಯ, ಗದ್ಯ, ಗಾಯನ, ವಾದ್ಯ, ಸಂಗೀತ ಮುಂತಾದ ನಾನಾ ಬಗೆಯ ಕಲೆಗಳಲ್ಲಿ ಪಾರಂಗತನಾಗಿದ್ದ. ದುರ್ದೈವದಿಂದ ಕತ್ತಿವರಸೆಯನ್ನೂ ಕಲಿತು ಯಾವುದೋ ಹೋರಾಟದಲ್ಲಿ ಕತ್ತಿ ಏಟಿಗೆ ಬಲಿಯಾದ.

ಹುಟ್ಟು ಪ್ರತಿಭಾವಂತನಾಗಿದ್ದ ಮೆಕಾಲೆಗೆ ಎರಡನೆಯ ವಯಸ್ಸಿನಿಂದಲೂ
ಪ್ರೌಢ ಹಿರಿಯರಂತೆ ಸಂಭಾಷಿಸುವುದು ವಾಡಿಕೆಯಾಗಿತ್ತು. ಆಗಲೇ ಅವನು ಮಕ್ಕಳಿ
ಗಾಗಿ ಬಹು ಶ್ರೇಷ್ಠ ವಾರ್ತಾಪತ್ರವನ್ನು ಲೇಖಿಸಿ ಪ್ರಕಟಿಸುತ್ತಿದ್ದ. ಏಳನೇ ವಯಸ್ಸಿ
ನಲ್ಲಿ "Compendium of universal History from Ancient
to Modern Times" ಎಂಬ ಭಾರಿ ಗ್ರಂಥವನ್ನೂ, ಅನೇಕ ಕಾವ್ಯ, ಗೀತೆ
ಗಳನ್ನೂ ಮತ್ತು ತನ್ನ ವಂಶಾವಳಿಯ ಚರಿತ್ರೆಯ ಮಹಾಕಾವ್ಯಗಳನ್ನೂ ರಚಿಸಿದ.
ಅವನ ಸ್ಮರಣಶಕ್ತಿ ಎಷ್ಟು ಚಕಿತವಾಗಿತ್ತೆಂದರೆ ಅವನು ಅನೇಕ ಚರಿತ್ರ ಗ್ರಂಥಗಳನ್ನು
ಮೂಲಾಧಾರ (Reference) ಗ್ರಂಥವಾವುದನ್ನೂ ಒಂದು ಸಾರಿಯಾದರೂ
ತಿರುಗಿ ನೋಡದೆ ರಚಿಸುತ್ತಿದ್ದ. ಗ್ರಂಥದ ಯಾವ ಪುಟವನ್ನಾದರೂ ಕ್ಷಣದರ್ಶನ
ಮಾಡಿದರೆ, ಆ ಪುಟದ ಸಂಗತಿಗಳೆಲ್ಲ ಅವನ ಮೆದುಳಿನಲ್ಲಿ ವಿಲೀನವಾಗುತ್ತಿದ್ದವು.
ಒಂದು ಪಂದ್ಯವನ್ನು ಗೆಲ್ಲಲು ಅವನು ಮಿಲ್ಟನ್ ಕವಿಯ ಕಾವ್ಯವೊಂದನ್ನು ಒಂದು
ರಾತ್ರಿಯಲ್ಲಿ ಕಲಿತನಂತೆ. "Paradise Lost" ಮತ್ತು "Pilgrim's
Progress" ಎಂಬ ಗ್ರಂಥಗಳು ಪೃಥ್ವಿಯಲ್ಲಿ ಒಂದು ನಕಲೂ ಇಲ್ಲದಂತೆ ನಾಶವಾಗಿ
ಹೋದರೂ ತಾನು ಅವುಗಳನ್ನು ನೆನಪಿನಿಂದ ಅಕ್ಷರಶಃ ಪುನರುತ್ಪತ್ತಿ ಮಾಡಬಲ್ಲೆ
ನೆಂಬ ಅವನ ಹೇಳಿಕೆ ಇತಿಹಾಸಪ್ರಸಿದ್ಧವಾಗಿದೆ.

ಅಲೆಗ್ಸಾಂಡರ್ ಮಹಾಶಯನು (Alexander the Great) ತನ್ನ
ಬಾಲ್ಯದಲ್ಲಿಯೇ ತನ್ನ ತಂದೆ ಫಿಲಿಪ್ ರಾಜನ ಆಸ್ಥಾನಕ್ಕೆ ನಾನಾ ದೇಶಗಳಿಂದ ಬರು
ತ್ತಿದ್ದ, ಬಹು ಹಿರಿಯ ಅನುಭವಸ್ಥ ರಾಯಭಾರಿಗಳೊಡನೆ ಕಠಿಣ ರಾಜಕೀಯ
ಸಮಸ್ಯೆಗಳನ್ನು ಬಹು ಚಾತುರ್ಯದಿಂದ ಚರ್ಚಿಸುತ್ತಿದ್ದ. ಬಹು ಕೆರಳಿದ್ದ ಒಂದು
ಮುಂಗೋಪಿ ಕುದುರೆಯನ್ನು ಅಂಕೆಯಲ್ಲಿಟ್ಟು ಅದರ ಮೇಲೆ ಸವಾರಿ ಮಾಡುವುದು,
ಅಸಾಧ್ಯವೆಂದು ಅನೇಕ ಅನುಭವಸ್ಥ ಸವಾರರು ಕೈಬಿಟ್ಟಿದ್ದಾಗ, 16 ವರ್ಷದ ಅಲೆ

ಗ್ಯಾಂಡರ್ ಅದನ್ನು ಕೂಡಲೇ ಹದಕ್ಕೆ ತಂದು ಅದರ ಮೇಲೆ ಸವಾರಿಮಾಡಿದ್ದು ಎಲ್ಲರನ್ನೂ ದಂಗುಮಾಡಿತು. ಚಾರಲ್ಸ್ ಇವಾನ್ಸ್ ಹ್ಯೂಸ್ ಎಂಬ ಬಾಲಕ ಎಂಟನೆಯ ವಯಸ್ಸಿನಲ್ಲಿ ಷೇಕ್ಸ್‌ಪಿಯರ್ ಮಹಾ ಕವಿಯ ಎಲ್ಲ ಗ್ರಂಥಗಳನ್ನು ಓದಿ ಮುಗಿಸಿದ್ದ. ವಿಲಿಯಂ ಕುಲನ್ ಬ್ರಾಯೆಂಟ್ 16ನೇ ತಿಂಗಳಲ್ಲೇ ಅಕ್ಷರ ಮಾಲೆಯನ್ನು ಕಲಿತ.

ರಾಬರ್ಟ್ ವಿರ್ನರ್ 18ನೇ ತಿಂಗಳಲ್ಲಿ ವರ್ಣಮಾಲೆಯನ್ನು ಕಲಿತು ಎರಡನೇ ವರ್ಷದಲ್ಲಿ ಓದತೊಡಗಿದ: 11ರಲ್ಲಿ ಕಾಲೇಜಿಗೆ ಹೋದ. 14ರಲ್ಲಿ ಪದವೀಧರನಾದ. 18 ರಲ್ಲಿ ಹಾರ್ವಾರ್ಡ್ ವಿಶ್ವವಿದ್ಯಾನಿಲಯದಲ್ಲಿ ಡಾಕ್ಟೋರೇಟ್ ಪದವೀಧರನಾಗಿ, ಪ್ರಖ್ಯಾತ ಬರ್ಟ್ರಾಂಡ್ ರಸಲ್‌ರೊಡನೆ ಕೇಂಬ್ರಿಡ್ಜ್‌ನಲ್ಲಿ ವ್ಯಾಸಂಗ ಮಾಡಿ, ಪ್ರಾಧ್ಯಾಪಕನಾಗಿ 1964 ರಲ್ಲಿ ಕಾಲವಾದ.

ಎಡ್ಮಂಡ್ ಜೋರ್ಡನ್ ಎಂಬಾತ ಹೊಸ ಅಟಾರ್ನಿಗಳ ಯೋಗ್ಯತೆಯನ್ನು ನಿರ್ಣಯಿಸಲು 17ನೇ ವಯಸ್ಸಿನಲ್ಲಿ ನಿಯುಕ್ತ ಮಂಡಳಿಯ ಮುಖಾಧಿಕಾರಿಯಾಗಿದ್ದ ಜಾಕೋಬಿಯು 19 ನೇ ವಯಸ್ಸಿನಲ್ಲಿ ಕಿವುಡ ಶಾಲೆಯ ಪ್ರಮುಖ ಡೈರೆಕ್ಟರ್ ಆದ. ಬ್ರಯಂಟ್ ಎಂಬ ಪ್ರಸಿದ್ಧ ಕವಿ 16 ನೇ ತಿಂಗಳಲ್ಲಿ ಅಕ್ಷರಮಾಲೆಯನ್ನು ಅರಿತಿದ್ದ. ನದ್ಯಾರುಷವಾ ಎಂಬ ರಷ್ಯದ ಚಿಕ್ಕ ಹುಡುಗಿ 200 ಚಿತ್ರಗಳನ್ನು ರಚಿಸಿದಳು. ಹ್ಯೂಜಸ್ ಎಂಬ ವಿಖ್ಯಾತ ನ್ಯಾಯ ಶಾಸ್ತ್ರಜ್ಞ ಮೂರನೇ ವಯಸ್ಸಿನಲ್ಲಿ ಓದುವುದನ್ನು ಕಲಿತು 8 ರ ಹೊತ್ತಿಗೆ ಷೇಕ್ಸ್ಪಿಯರ್ ಕವಿಯ ಗ್ರಂಥಗಳನ್ನು ಓದಿದ್ದ. ಪಂಜಾಬಿನ ಅಮೃತಸರದ ಅತಲ್‌ರಾಯ್ ಎಂಬ ಕಿರಿಯ ಬಾಲಕ ಅಪಾರ ಪಾಂಡಿತ್ಯ ಚಾತುರ್ಯದ ಮೆಚ್ಚಿಗೆಗಾಗಿ ಅವನನ್ನು "ವೃದ್ಧ ಅಕಲ್" ಎಂಬ ಅಭಿಧಾನದಿಂದ ಜನರು ಸನ್ಮಾನಿಸಿದರು. ಅವನು 1678 ರಲ್ಲಿ 9 ನೇ ವಯಸ್ಸಿನಲ್ಲಿ ಮೃತನಾಗಲು ಅವನ ಬಾಳುವೆಯ ಒಂದೊಂದು ಸಂವತ್ಸರವನ್ನೂ ಸೂಚಿಸಲು 9 ಅಂತಸ್ತಿನ "ಬಾಬಾ ಅತಲ್" ಗೋಪುರವು ಅವನ ಸ್ಮಾರಕವಾಗಿ ನಿಂತಿತು. ಬಾಣೇಶ್ವರ ವಿದ್ಯಾಲಂಕಾರನು 12ನೇ ವಯಸ್ಸಿನಲ್ಲಿ 103 ಪದ್ಯಗಳಿದ್ದ ಒಂದು ಸಂಸ್ಕೃತ ಗೀತವನ್ನು ಒಂದೇ ಸಾರಿ ಕೇಳಿ ಅವುಗಳನ್ನೆಲ್ಲಾ ಸಂಪೂರ್ಣವಾಗಿ ಹೇಳಿದ. ಫಿರೋಜಾ ಇರಾನಿ ಎಂಬ ಹತ್ತು ವರ್ಷದ ಬೊಂಬೋಯಿಯ ಪಾರ್ಸಿ ಹುಡುಗಿ ಅಮೇರಿಕಕ್ಕೆ "ಬಾಲ ರಾಯಭಾರಿ"ಯಾಗಿ ನೇಮಿಸಲ್ಪಟ್ಟಳು. ಬವೇರಿಯದ ಎಲ್ಮಾಕ್ ಈಡಕ್ ಐದನೇ ವಯಸ್ಸಿನಲ್ಲಿ ಪ್ರೌಢ ಗಣಿತ ಲೆಕ್ಕಗಳನ್ನು ಮಾಡುತ್ತಿದ್ದ. ಆರನೇ ವಯಸ್ಸಿನಲ್ಲಿ ಕೆಲವು ವಾರಗಳೊಳಗೆ ಶೀಘ್ರಲಿಪಿ (shart hand) ಯನ್ನು ಕಲಿತ. 12 ನೇ ವಯಸ್ಸಿನಲ್ಲಿ ಮ್ಯೂನಿಚ್ ವಿಶ್ವವಿದ್ಯಾನಿಲಯದಲ್ಲಿ ಪ್ರೌಢ ಗಣಿತವನ್ನು ಕಲಿಯಲು ಸರ್ಕಾರವು ಅವನಿಗೆ ಅನುಮತಿ ಕೊಟ್ಟಿತು. "ಸಂಖ್ಯಾ ವಿದ್ಯೆಯ ಬಾಲ ಪ್ರಚಂಡ" ನೆಂದು ಜಗದ್ವಿಖ್ಯಾತನಾಗಿ, ಲಂಡನ್ನಿನ ರಾಯಲ್ ಸೊಸೈಟಿಯ F.R.S. ಎಂಬ ಅತ್ಯುನ್ನತ



ಪ್ರಶಸ್ತಿಯನ್ನು ಪಡೆದು, ಇಡೀ ಜಗತ್ತಿನ ಅತಿ ಪ್ರವೀಣ ಗಣಿತ ಶಾಸ್ತ್ರಜ್ಞರನ್ನು ಮಂತ್ರಮುಗ್ಧರನ್ನಾಗಿ ಮಾಡಿದ ಶ್ರೀನಿವಾಸ ರಾಮಾನುಜನ್‌ನ ಪ್ರತಿಭೆ ಮಿಂಚಿನಂತೆ ಬೆಳಗಿ ದಿಗ್ವಿಜಯ ಪಡೆಯಿತು.

ಕ್ಯೂಬಾ ದೇಶದ ಕ್ಯಾಸಬ್ಲಾಂಕಾ ಎಂಬ ಬಾಲಕ ನಾಲ್ಕನೇ ವಯಸ್ಸಿನಲ್ಲಿ ತನ್ನ ತಂದೆ ಚದುರಂಗವಾಡುತ್ತಿದ್ದುದನ್ನು ನೋಡಿ ಕಲಿತು, ತನ್ನ ತಂದೆಯನ್ನೇ ಆಟಗಳಲ್ಲಿ ಬಾರಿಬಾರಿಗೂ ಸೋಲಿಸಿ, 12ನೇ ವರ್ಷಕ್ಕೆ ಕ್ಯೂಬಾದ ಅಗ್ರೇಸರ ಛಾಂಪಿಯ್ನ ಆಗಿ ಕೆಲವು ವರ್ಷಗಳಲ್ಲಿ ಸ್ಪೇನ್ ದೇಶದಲ್ಲಿ ನಡೆದ ಪ್ರವೀಣ ದುರಂಧರರ ಪಂದ್ಯದಲ್ಲಿ ಪ್ರಥಮ ಬಹುಮಾನವನ್ನು ಪಡೆದು ಲೋಕವನ್ನು ದಂಗುಗೊಳಿಸಿದ. ಅನುಪಮ ಪ್ರಭಾವವನ್ನು ಬೀರಿ 20 ನೇ ಶತಮಾನದ ವಿಶ್ವಛಾಂಪಿಯನ್ ಪ್ರಶಸ್ತಿಯನ್ನು ಗಳಿಸಿದ. ರಷ್ಯದ ಬೋರಿಸ್ ಸ್ಪಾಸ್ಕಿ ಎಂಬ ಬಾಲಕ ನಾಲ್ಕನೇ ವಯಸ್ಸಿನಲ್ಲಿ ಚದುರಂಗವನ್ನು ಕಲಿತು, ಹತ್ತರಲ್ಲಿ ಜೂನಿಯರ್ ಛಾಂಪಿಯನ್ ಆಗಿ, 16 ರಲ್ಲಿ ಅಂತರ ರಾಷ್ಟ್ರೀಯ ವಿಜೇತನಾದ. ಪೋಲೆಂಡಿನ ಸ್ಯಾಮ್ಯುಯೆಲ್ ರೆಸೆನ್‌ಸ್ಕಿ ಎಳೆ ವಯಸ್ಸಿನಲ್ಲೇ ಚದುರಂಗ ಪ್ರವೀಣನಾಗಿ ಜರ್ಮನಿಯ ನುರಿತ 20 ಮಂದಿ ಪ್ರಖ್ಯಾತ ಹಿರಿಯ ಆಟಗಾರರೊಡನೆ ಏಕಕಾಲಿಕ ಆಟವನ್ನಾಡಿ 16 ಜನರನ್ನು ಸೋಲಿಸಿದ. ಅಮೇರಿಕದ ಬಾಬೀ ಫಿಶ್ಚರ್ 14ನೇ ವಯಸ್ಸಿನಲ್ಲಿ ಅಮೇರಿಕದ ಛಾಂಪಿಯನ್ ಆಗಿ 16 ರಲ್ಲಿ ಛಾಂಪಿಯನ್ ಪ್ರಶಸ್ತಿಯನ್ನು ಆರುಸಾರಿ ಗೆದ್ದು, ಸರ್ವಶ್ರೇಷ್ಠ 11 ಆಟಗಾರರನ್ನು ಸೋಲಿಸಿದ. ಅವರಲ್ಲಿ ನಾಲ್ವರು ಅಂತರ್‍ರಾಷ್ಟ್ರೀಯ ಪ್ರಖ್ಯಾತರು. ಪ್ರಚಂಡ ರೆಷೆವ್‌ಸ್ಕಿಯನ್ನು ಐದೇ ಚಲನೆಗಳಲ್ಲಿ ಷಾಮತ್ ಮಾಡಿ ಸೋಲಿಸಿದ.

ಆಲ್ಬರ್ಟ್ ಡೂರೆಟ್ 13 ನೇ ವಯಸ್ಸಿನಲ್ಲಿ ಆತ್ಮಚಿತ್ರ ರಚಿಸಿದ, ಸಿಸಿಲಿಯ ಕುರುಬ ಹುಡುಗನೊಬ್ಬ 10ನೇ ವಯಸ್ಸಿನಲ್ಲಿ ದೊಡ್ಡ ಸಂಖ್ಯೆಗಳ ಘನ ಮೂಲವನ್ನು (cube root) 30 ಸೆಕೆಂಡುಗಳಲ್ಲಿ ಹೇಳುತ್ತಿದ್ದ. ಜರ್ಮನಿಯ ರಕಲ್ ಎಂಬ ಬಾಲಕ 204 ಬೇರೆ ಬೇರೆ ಸಂಖ್ಯೆಗಳನ್ನು 13 ನಿಮಿಷಗಳಲ್ಲಿ ಮನದಟ್ಟು ಮಾಡಿಕೊಳ್ಳುತ್ತಿದ್ದ. ಫಿಂಕಲ್ ಸ್ಟೈನ್ ಎಂಬ ಪೋಲೆಂಡ್ ದೇಶದ ಹುಡುಗ 20 ಅಂಕೆಗಳ ಸಂಖ್ಯೆಯನ್ನು 4½ ಸೆಕೆಂಡುಗಳಲ್ಲಿ ಬಾಯಿಪಾಠ ಮಾಡಿದ. ಟಾಂ ಫುಲ್ಲರ್ ಎಂಬ ನಿರಕ್ಷರಕುಕ್ಷಿ ನೀಗ್ರೋ ಗಣಕಯಂತ್ರದಂತೆ ಲೆಕ್ಕ ಎಣಿಸಲು ನೇಮಿಸಲ್ಪಟ್ಟ 20 ವರ್ಷ 1 ದಿನ, 12 ಗಂಟೆಗಳಲ್ಲಿ ಎಷ್ಟು ಸೆಕೆಂಡುಗಳಿವೆ ಎಂಬುದನ್ನು 1½ ನಿಮಿಷಗಳಲ್ಲಿ ಬಾಯಿಲೆಕ್ಕ ಮಾಡಿದ. ಓದು ಬರಹವಿಲ್ಲದ ಬಕ್ಸ್ಟನ್ ಯಾವ ಹೊಲಗದ್ದೆಗಳ ಸುತ್ತ ಹೋದರೂ ಅಲ್ಲಿ ಎಷ್ಟು ಚದುರಂಗಗಳಿವೆಯೆಂದೂ ಯಾವ ಉಪನ್ಯಾಸ ಕೇಳಿದರೂ ಅದರಲ್ಲಿ ಎಷ್ಟು ನುಡಿಗಳಿವೆಯೆಂದೂ ಅಂತಃ ಸ್ಫೂರ್ತಿಯಿಂದ ತಿಳಿಸುತ್ತಿದ್ದ. 23145789 ಗಜ ಉದ್ದ, 564232 ಗಜ ಅಗಲ, 549 ಗಜ ಎತ್ತರವಾದ

ಬ್ಲಾಕಿನಲ್ಲಿ ಎಷ್ಟು ಘನ ಅಡಿಗಳಿವೆ ಎಂಬುದನ್ನು ಹೇಳಿದ. ಸೋಮೇಶ ಚಂದ್ರಬಸು ಎಂಬ ಹುಡುಗ ಬಹು ದೀರ್ಘ ಸಂಖ್ಯೆಗಳ 109 ನೇ ಮೂಲವನ್ನು ಮಿಂಚಿನ ವೇಗದಲ್ಲಿ ಹೇಳುತ್ತಿದ್ದ.

ಟ್ರೂಮನ್ ಸಾವೋರ್ಡ್ ಎಂಬ ಹತ್ತು ವರ್ಷದ ಅಮೇರಿಕನ್ ಹುಡುಗನನ್ನು 765 ನ್ನು 18 ಸಾರಿ 365 ರಿಂದ ಗುಣಿಸಿದರೆ ಎಷ್ಟಾಗುತ್ತದೆಂದು ಕೇಳಿದಾಗ ಅವನು ಬುಗರಿಯಂತೆ ಸುತ್ತುತ್ತಾ ತನ್ನ ಕೈಗಳನ್ನು ಕಚ್ಚುತ್ತಾ, ಕಣ್ಣುಗಳನ್ನು ಹೊರಳಿಸುತ್ತಾ ತನ್ನಷ್ಟಕ್ಕೆ ತಾನೇ ಮಾತನಾಡುತ್ತಾ, ಮುಗುಳು ನಗುತ್ತಾ ಒಂದು ನಿಮಿಷದಲ್ಲಿ ಸರಿಯಾದ ಉತ್ತರವನ್ನು ಹೇಳಿದ. ಪ್ರಖ್ಯಾತ ಭೌತಿಕ ಶಾಸ್ತ್ರಜ್ಞ ಆಂಪೇರ್ (Ampere) ನಾಲ್ಕು ವರ್ಷದವನಾಗಿದ್ದಾಗ ದೊಡ್ಡ ಲೆಕ್ಕಗಳನ್ನು ಮಾನಸಿಕವಾಗಿ ಮಾಡುತ್ತಿದ್ದ. ಕಾರ್ಲ್ ಫ್ರೆಡರಿಕ್ ಲಾಸ್ 3 ನೇ ವಯಸ್ಸಿನಲ್ಲಿಯೇ ಗಣಿತಕುಶಲನಾಗಿ ತನ್ನ ತಂದೆಯ ಕೆಲಸಗಾರರ ಸಂಬಳಗಳ ಲೆಕ್ಕಾಚಾರದಲ್ಲಿ ಮಾಡುತ್ತಿದ್ದ ತಪ್ಪುಗಳನ್ನು ತಕ್ಷಣ ಹೇಳುತ್ತಿದ್ದ. ಜಾರ್ಜ್ ಬಿಡೇರ್ ಆಟಆಟಗಳಲ್ಲೇ ಗುಣಾಕಾರ, ಭಾಗಾಕಾರ ಮುಂತಾದುವುಗಳನ್ನು 6 ನೇ ವಯಸ್ಸಿನಲ್ಲಿ ತಾನೇ ಕಲಿತ. ಒಂದು ಉದ್ದನೆಯ ಸಂಖ್ಯೆಯನ್ನು ಅವನಿಗೆ ವ್ಯತಿಕ್ರಮದಿಂದ ಹೇಳಿ ಅದನ್ನು ನೇರವಾಗಿ ತಿಳಿಸೆಂದು ಹೇಳಿದಾಗ ಅವನು ಅದನ್ನು ತತ್‌ಕ್ಷಣವೇ ಹೇಳಿದ. ಒಂದು ಗಂಟೆಯ ಅನಂತರ ಆ ಸಂಖ್ಯೆಯನ್ನೇ ಆವರ್ತಿಸಲು ಅವನಿಗೆ ಹೇಳಿದಾಗ ಆಗಲೂ ಅದನ್ನು ಸರಿಯಾಗಿ ಹೇಳಿದ.

ಕೆಲವು ಬಾಲ ಸಂಗೀತ ಪಟುಗಳು ಅದ್ಭುತ ಪ್ರತಿಭಾ ಶಕ್ತಿಯನ್ನು ಪ್ರದರ್ಶಿಸಿದ್ದಾರೆ. ಸರ್ ಲ್ಯಾಂಡನ್ ರೋನಾಲ್ಡ್, ಮಾತು ಬರುವುದಕ್ಕೆ ಮೊದಲೇ ಪಿಯಾನೋ ಬಾರಿಸುತ್ತಿದ್ದ. ಯಹೂದಿ ಮೆನುಹಿನ್ 3ನೇ ವಯಸ್ಸಿನಲ್ಲಿ ಪಿಟೀಲು ಬಾರಿಸಲು ಆರಂಭಿಸಿ ಮುಂದೆ ಲೋಕಪ್ರಖ್ಯಾತ ಸಂಗೀತಗಾರನಾದ. ಸ್ಪೇನ್ ದೇಶದ ವಿಸ್ಮಯಕಾರಿ ಪಿಯಾನೋಗಾರ ಅರಿಯೋಲಿಯು 1900ರಲ್ಲಿ ತನ್ನ 3½ವಯಸ್ಸಿನಲ್ಲಿ ಅಂತರಾಷ್ಟ್ರೀಯ ಪ್ರವೀಣರ ಸಂಘದಿಂದ ಪರೀಕ್ಷಿಸಲ್ಪಟ್ಟ ಅವನು ಎಷ್ಟು ಕಠಿಣ ಸ್ವರಗಳನ್ನಾದರೂ ಒಂದು ಬಾರಿ ಕೇಳಿದ ಕೂಡಲೇ ಬಾರಿಸುತ್ತಿದ್ದ. ಅವನ ಕೈಗಳು ಆಕ್ಟೇವ್‌ಗಳಿಗೆ ಎಟುಕದಷ್ಟು ಚಿಕ್ಕದಾಗಿದ್ದರೂ ಅವುಗಳನ್ನು ಅವನು ಬಾರಿಸುತ್ತಿದ್ದುದು ಆಶ್ಚರ್ಯಕರವಾಗಿತ್ತು. ಚಾರ್ಲ್ಸ್ ಮತ್ತು ಸ್ಯಾಮ್ಯುಯಲ್ ವೆಸ್ಲಿಯರು ಸ್ವರಮಾಲಿಕೆಯನ್ನೂ, ಹಾರ್ಪ್ಸಿಕಾರ್ಡನ್ನೂ 3ನೇ ವಯಸ್ಸಿನಲ್ಲೇ ಬಾರಿಸುತ್ತಿದ್ದರು. ಚಾರ್ಲ್ಸ್ ತನ್ನ ತಾಯಿಯು ಹಾಡಿದ ಅಥವಾ ಬಾರಿಸಿದ ಯಾವ ರಾಗವನ್ನೂ ಒಂದು ನಿಮಿಷವಾದರೂ ಅನುಮಾನಿಸದೆ ಕೂಡಲೇ ಬಾರಿಸುತ್ತಿದ್ದ. ಮೇಯರ್ ಬೀರ್ 9ನೆ ವರ್ಷದಲ್ಲಿ ಬರ್ಲಿನ್‌ನಲ್ಲಿ



ಪಿಯಾನೊ ನುಡಿಸುವುದರಲ್ಲಿ ಅಗ್ರಗಣ್ಯನಾಗಿದ್ದ. ಹ್ಯಾಂಡಲ್ 5ನೇ ವರ್ಷಕ್ಕೆ ಮೊದಲೇ ಬಾರಿಸುತ್ತಿದ್ದ.

ವೀಣೆ ಶೇಷಣ್ಣನವರು 7ನೇ ವಯಸ್ಸಿನಲ್ಲಿ ಬಹು ಜಟಿಲ ಪಲ್ಲವಿಯೊಂದನ್ನು ನುಡಿಸಿದಾಗ ಮೈಸೂರಿನ ಮಹಾರಾಜರು ನಿಬ್ಬೆರಗಾದರು. ಬೇಬಿ ಗಾಯತ್ರಿ ವೀಣೆ ಬಾರಿಸುತ್ತಿದ್ದಳು. ಕಾರ್ತಿಕ ಶೇಷಾದ್ರಿ ಸಿತಾರು ನುಡಿಸುತ್ತಿದ್ದ. ಮಾಸ್ಟರ್ ಮನೋಹರ್ ಬರ್ವೆ ಹಲವು ವಾದ್ಯಗಳಲ್ಲಿ ಪ್ರತಿಭಾವಂತರಾಗಿದ್ದರು. 4½ ವರ್ಷದ ಹಸುಳೆ ರವಿಕಿರಣನು ಮದ್ರಾಸ್ ಮ್ಯೂಜಿಕ್ ಅಕಾಡೆಮಿ ಮತ್ತು ಬೆಂಗಳೂರು ಗಾಯನ ಸಮಾಜದಲ್ಲಿ ಸಂಗೀತ ಜ್ಞಾನವನ್ನು ಪಕಾಶಿಸಿ ಅನೇಕ ರಾಗಗಳನ್ನೂ ತಾಳಗಳನ್ನೂ, ಗುರುತಿಸುತ್ತಿದ್ದ. ಆಸ್ಟ್ರೇಲಿಯದ ಹುಡುಗಿ ರಿಟಾ ರೈಜ್‌ಮನ್ ಆರು ತಿಂಗಳ ಶಿಶುವಾಗಿದ್ದಾಗಲೇ ಸಂಗೀತಕ್ಕೆ ತಕ್ಕ ತಾಳ ಹಾಕುತ್ತಿದ್ದಳು. 2ನೇ ವಯಸ್ಸಿನಲ್ಲಿ ಪಿಯಾನೋ ನಾದವನ್ನು ಕಿವಿಯಿಂದ ಕೇಳಿ ಬಾರಿಸುತ್ತಿದ್ದಳು. 3ರಲ್ಲಿ ಒಂದು ತಿಂಗಳ ಶಿಕ್ಷಣದ ನಂತರ ಸಂಗೀತದ ಚಾರ್ಟ್‌ಗಳನ್ನು ಗ್ರಹಿಸಿದಳು. 5ವರ್ಷದ ಈ ಹಸುಳೆಯ ಪುಟ್ಟ ಕಾಲುಗಳು ಪೀಠಕ್ಕೆ ನಿಲುಕದಿದ್ದರೂ ಪುಟ್ಟ ಕೈಗಳು ಆಕ್ಟೇವಿಗಿಂತ ಚಿಕ್ಕದಾಗಿದ್ದರೂ, ಕೃತಿಗಳನ್ನು ತಾನೇ ರಚಿಸಿ ನುಡಿಸುತ್ತಿದ್ದಳು. ಇಟಲಿಯ ಹತ್ತು ವರ್ಷದ ಗಾಂಬಾ ಲಿವರ್ಪೂಲ್ ಪಟ್ಟಣದ ಗಾಯಕ ಮಂಡಲಿಯ ಅಧಿನಾಯಕನಾಗಿ, ಗೀತಮಂಡಲದಲ್ಲಿ ತನ್ನ ಪ್ರತಿಭಾ ಶಕ್ತಿಯನ್ನು ಪ್ರದರ್ಶಿಸಿದ.

ಮೊಜಾರ್ಟ್ (Mozart) 3ನೇ ವರ್ಷದಲ್ಲಿ ಹಾರ್ಪ್ಸಿಕಾರ್ಡ್ ವಾದ್ಯವನ್ನು ಬಾರಿಸುತ್ತಿದ್ದ. 4ರಲ್ಲಿ ನೃತ್ಯಸಂಗೀತ ರಚಿಸುತ್ತಿದ್ದ. 5ರಲ್ಲಿ ಮೊಟ್ಟಮೊದಲ ಸಾರಿ ಪಿಟೀಲು ಹಿಡಿದು ನೇರವಾಗಿ ಬಾರಿಸಿದ. 6ರಲ್ಲಿ ಸಂಗೀತ ಪರ್ಯಟನಕ್ಕೆ ಆಸ್ಟ್ರೇಲಿಯಾಕ್ಕೆ ಹೋದ. 7ರಲ್ಲಿ ಪ್ಯಾರಿಸ್, ಲಂಡನ್, ಪಿಯನ್ನಾಗಳಲ್ಲಿ ಅಮೋಘ ಚಾತುರ್ಯದ ಸಂಗೀತ ಕಛೇರಿಗಳನ್ನು ನಡೆಸಿದ. 9ರಲ್ಲಿ ಹಾಲೆಂಡನಲ್ಲಿ ಪೃಥ್ವಿಯ ಅತ್ಯಂತ ದೊಡ್ಡ ಜಟಿಲ ಆರ್ಗನ್ ವಾದ್ಯವನ್ನು ನುಡಿಸಿದ. 10ರಲ್ಲಿ ಅತಿ ದೀರ್ಘ ಮೊದಲನೆ ಕೃತಿಯನ್ನು ಲೇಖಿಸಿ ಪ್ರಖ್ಯಾತ ನಿರ್ಮಾಪಕನಾದ. 13ರಲ್ಲಿ ಒಬ್ಬನೇ ಇಟಲಿಗೆ ಹೋಗಿ ಮೇಳ ಸಂಗೀತ ಕಚೇರಿಗಳನ್ನು ನಡೆಸಿದ. 14ರಲ್ಲಿ ಪೋಪನ ಅರಮನೆಯಲ್ಲಿ ನುಡಿಸಿ ಆ ಕಾಲದ ಅತಿ ಶ್ರೇಷ್ಠ ಸಂಗೀತ ಡಿಗ್ರಿಗಳನ್ನೆಲ್ಲಾ ಗಳಿಸಿದ. ಬಹು ದೊಡ್ಡ ಕ್ಲಿಷ್ಟವಾದ ಗೀತವೊಂದನ್ನು ಒಂದೇ ಸಾರಿ ಕೇಳಿ ನೆನಪಿನಿಂದ ಅದನ್ನು ಆ ಕೂಡಲೇ ಬರೆದು ಪೋಪನಿಂದ ಚಿನ್ನದ ಪ್ರಶಸ್ತಿಯನ್ನು ಪಡೆದ. 16ರಲ್ಲಿ ವಿಶ್ವದ ಅತಿ ಶ್ರೇಷ್ಠ ಗಾಯಕನೆಂದು ಸನ್ಮಾನಿಸಲ್ಪಟ್ಟು 623 ಅಮರ ಕೃತಿಗಳನ್ನು ರಚಿಸಿ, 25ನೇ ವಯಸ್ಸಿನಲ್ಲಿ ನಿಧನನಾದ.

## ಒಳ ಕಣ್ಣ ತೆರೆಯೋ !

ನಿಶೆಯೊಳಾಗಸದಲ್ಲಿ
ನೀನು ಕಾಣುವೆ ಹೊಳೆವ
ಲಕ್ಷೋಪಲಕ್ಷ ನಕ್ಷತ್ರಗಳನು
ಬೆಳಗಾಗ ನೀನೆದ್ದು
ಕತ್ತೆತ್ತಿ ನೋಡಿದರೆ
ಕಾಣಿಸವು ಚುಕ್ಕಿಗಳು, ಬಯಲು ಬಾನು.
ಇದ್ದರೂ ಹಗಲಿನಲಿ
ಕಾಣಿಸದ ತಾರೆಗಳ-
ನಿಲ್ಲವೇ ಇಲ್ಲವೆಂದೆನ್ನಬೇಡ
ಅಜ್ಞಾನದಂಧತ್ವ
ಮುಸುಕಿರಲು ಕಂಗಳಿಗೆ
ಇದ್ದರೂ ಕಾಣಿಸನು ಮಾದೇವ ನಮಗೆ
ಒಳಕಣ್ಣ ತೆರೆದವನ
ಕಾಣದೆಯೆ ಆ ದೇವ-
ನಿಲ್ಲವೆನ್ನುವ ವಾದ ಬೇಡ ಬೇಡ !

"ಕಾವ್ಯಸುಧಾಪ್ರಿಯ"
(ಕೆ. ಜಿ. ರಂಗಯ್ಯ)
ಸ್ಫೂರ್ತಿ:- ಪರಮಹಂಸ ವಾಣಿ



## ಅಜ್ಞಾತ ಶಿವಶರಣ ವಚನಕಾರ ಗಜೇಶಮಸಣಯ್ಯ

—ಎಸ್. ಎಸ್. ಭೂಸರೆಡ್ಡಿ

ಎಲೆಯ ಮರೆಯ ಹೂವಿನಂತೆ ಶರಣ ಸಂಸ್ಕೃತಿಯ ಸೌರಭ ಸೂಸಿದ ಶರಣ ಶಿರೋಮಣಿ, ಗಜೇಶಮಸಣಯ್ಯ. ಹನ್ನೆರಡನೆಯ ಶತಮಾನದಲ್ಲಿ ಬಾಳಿಬೆಳಗಿದ ಧೀಮಂತಮಣಿ. ಗಜೇಶಮಸಣಯ್ಯ ಅಕ್ಕಲಕೋಟೆಯ ಸಮೀಪವಿರುವ ಕರಜಿಗೆಯ ಗ್ರಾಮಕ್ಕೆ ಸೇರಿದವನು. ಅಲ್ಲಿ ಆತನ ಇಷ್ಟದೇವತೆಯಾದ ಗಜೇಶ್ವರನ ದೇವಾಲಯ ವಿರುವುದು. ಪೂರ್ವಕ್ಕೆ ನಲ್ವತ್ತು ಮೈಲುಗಳ ಅಂತರದಲ್ಲಿರುವ 'ಮನಹಳ್ಳಿ'ಯಲ್ಲಿ ಮಸಣಯ್ಯನ ದೇವಾಲಯವಿದೆ, ಪ್ರತಿವರ್ಷ ಜಾತ್ರೆ ನೆರವೇರುತ್ತದೆ. ಹಾಗೆಯೇ ಗುರುದರ್ಶನಕ್ಕೆ ಹೋಗುವಾಗ ಮಧ್ಯೆ ಲಿಂಗಪೂಜೆಗೆ ಕುಳಿತನೆಂದು ಹೇಳುವ 'ಬೆಣ್ಣಿ ತೊರೆ' ಎಂಬ ಹೆಸರಿನ ಹಳ್ಳವಿದೆ. ಈ ನಿಷ್ಠಾವಂತ ಶ್ರೇಷ್ಠ ಶಿವಶರಣನು ಏಕಚಿತ್ತ ದಲ್ಲಿ ಲಿಂಗಪೂಜೆಯಲ್ಲಿ ತೊಡಗಿದಾಗ ಬಾಹ್ಯ ಜಗತ್ತಿನ ಪರಿಜ್ಞಾನವೇ ತಪ್ಪಿಹೋಗು ತ್ತಿತ್ತು. ಅಡವಿಯ ಪ್ರಾಣಿ-ಪಶುಪಕ್ಷಿಗಳು ಈ ಲಿಂಗಪೂಜಾ ವೈಭವವನ್ನು, ಸಡಗರ ವನ್ನು ನಿಬ್ಬೆರಗಿನಿಂದ ನೋಡಿ ಸಂತೋಷಸಾಗರದಲ್ಲಿ ತೇಲುತ್ತಿದ್ದವು ; ಉಲಿಯು ತ್ತಿದ್ದವು ; ಮೌನವಾಗಿಯೇ ತಮ್ಮ ಸಹಕಾರ ನೀಡುತ್ತಿದ್ದವು. ಕ್ರೂರಮೃಗಗಳು ಈತನ ಸಮೀಪಕ್ಕೆ ಬರಲು ಹೆದರುತ್ತಿದ್ದವು. ಗಾಳಿ, ಮಳೆ, ಛಳಿ, ಬೆಂಕಿ, ಸಿಡಿಲು, ಮಿಂಚು ಆರ್ಭಟಿಸಿದರೂ ಬೆದರುತ್ತಿದ್ದಿಲ್ಲ ; ಬೆಚ್ಚುತ್ತಿದ್ದಿಲ್ಲ ; ಅಷ್ಟೊಂದು ಆತ್ಮಶಕ್ತಿ ಸಂಗಳಿಸಿಕೊಂಡಿದ್ದ.

ಅದೊಂದು ದಿನ, ಪರೀಕ್ಷಾಸಮಯ. ಆತನ ಭಕ್ತಿ ಶಕ್ತಿಯ ಪರೀಕ್ಷೆ ನಡೆದು ಹೋಯಿತು. ಮಸಣಯ್ಯ ಗುರುದರ್ಶನಕ್ಕಾಗಿ ಹೊರಟ ಮಾರ್ಗಮಧ್ಯದಲ್ಲಿ ನದಿ ಯೊಂದು ಅಡ್ಡಬಂದಿತು. ದಂಡೆಯ ಮೇಲೆ ಸೊಂಪಾಗಿ ಬೆಳೆದುನಿಂತ ಗಿಡಮರಬಳ್ಳಿ ಗಳು, ಇಂಪಾಗಿ ಜುಳುಜುಳು ಹರಿಯುವ ನೀರು ಈ ಪ್ರಶಾಂತ ರಮ್ಯಮನೋಹರ ವಾತಾವರಣ ಮಸಣಯ್ಯನನ್ನು ಲಿಂಗಪೂಜೆಗಾಗಿ ಕೈಮಾಡಿ ಕರೆಯಿತು. ಆಯಿತು. ಪತ್ರಿ-ಪುಷ್ಪಗಳನ್ನು ಆಯ್ದು ತಂದು ಲಿಂಗಪೂಜೆಯಲ್ಲಿ ನಿರತನಾದ, ಧ್ಯಾನಮಗ್ನನಾದ ಆಕಾಶದಲ್ಲಿ ಕಾರ್ಮೋಡ ಕವಿಯಿತು, ಗುಡುಗು ಸಿಡಿಲುಗಳು ಆರ್ಭಟಿಸಿದವು, ಧಾರಾ ಕಾರವಾಗಿ ಮಳೆ ಸುರಿಯಿತು, ಮಸಣಯ್ಯನಿಗೆ ಇದಾವುದರ ಪರಿವೆ ಇಲ್ಲ. ಮೂರು ಜಾವ ಏಕಪ್ರಕಾರವಾಗಿ ಮಳೆ ಸುರಿದರೂ ಆತನ ಮನ ಕದಲಲಿಲ್ಲ, ಏಕಾಗ್ರತೆ ಭಂಗ ವಾಗಲಿಲ್ಲ. ಲಿಂಗನಿಷ್ಠೆಯ ನಿಬ್ಬೆರಗನ್ನು ಕಂಡು ಬೆರಗಾಗಿ ನದಿ ತುಂಬಿಬಂದರೂ ಆತ ಕುಳಿತ ಸ್ಥಾನವನ್ನು ಬಿಟ್ಟು ಮುಂದೆ ಒಂದಾಗಿ ಹರಿದುಹೋಯಿತು. ಆತನ ಲಿಂಗ

ನಿಷ್ಠೆ ಅಪ್ರತಿಮವಾದುದು ; ಅನ್ಯಾದೃಶ್ಯವಾದುದು. ಇವನೊಬ್ಬ ಐತಿಹಾಸಿಕ ಪ್ರಸಿದ್ಧ ಶರಣನೆಂಬುದಕ್ಕೆ ಕನ್ನಡ ಕಾವ್ಯಗಳು ಸಾಕ್ಷಿ ನುಡಿಯುತ್ತವೆ. ಹಾಗೆಯೇ ಆತನ ಹೃದಯದಿಂದ ಹೊರಹೊಮ್ಮಿಬಂದ ಅಪಾರ ಅನುಭವದ ಅದ್ಭುತ ಕುಂಭದಂತಿರುವ ವಚನಗಳು ಇಂದಿಗೂ ಬಾಳಿಗೆ ಬೆಳಕು ಬೀರುವ ಸೂರ್ಯಕಿರಣೋಪಾದಿಯಾಗಿವೆ. ಶರಣಸತಿ ಲಿಂಗಪತಿ ಭಾವದಿಂದ ತುಂಬಿನಿಂತಿವೆ. ಲಿಂಗಾಂಗ ಸಾಮರಸ್ಯದ ಮೃದು ಮಧುರ ವಿಚಾರಗಳನ್ನು ಅತ್ಯಂತ ಮಾರ್ಮಿಕವಾಗಿ ಮನೋಜ್ಞವಾಗಿ ಬಿಂಬಿಸುತ್ತವೆ. ಶರಣತತ್ತ್ವದ ವಿಜಯ ಪತಾಕೆಯನ್ನು ಎತ್ತಿಹಿಡಿದಿವೆ, ಲಿಂಗತತ್ತ್ವದ ಡಿಂಡಿಮವನ್ನು ಹೃದಯಶಿವನಿಗೆ ಮುಟ್ಟಿಸುವಂತಿವೆ. ಈಗ ಈತನ ೬೬ ವಚನಗಳು ಉಪಲಬ್ಧವಿವೆ. ಪದವಿ, ಪ್ರಶಸ್ತಿಗಾಗಿ ಹಲಬು ಹಂಬಲಿಸುತ್ತಿರುವ ಜನಾಂಗಕ್ಕೆ ಆತನ ಸಂದೇಶವಿದು :

"ಪರಮ ಪದವಿಯ ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ
ಪರಮ ಪದವಿಯ ನಿಮ್ಮ ತಲೆಯಲ್ಲಿ ಹೊತ್ತುಕೊಳ್ಳಿ
ಎನಗೆ ನಿಮ್ಮ ತೊತ್ತುತನವೇ ಸಾಕು
ಮಹಾಲಿಂಗ ಗಜೇಶ್ವರ ದೇವಯ್ಯ
ನಿಮ್ಮ ಎದೆಯಲ್ಲಿರಿಸಿಕೊಳ್ಳಿ"

ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲವೆಂಬ ಅಣ್ಣನ ವಾಣಿಯನ್ನೇ ಇನ್ನೊಂದು ಬಗೆಯಲ್ಲಿ ಹೇಳುವ ವಚನಗಳಿದ್ದು ಆನೆಯನೇರಿಕೊಂಡು ಹೋಗುವ, ಕುಂಕುಮ ಕಸ್ತೂರಿ ಧರಿಸಿಕೊಂಡು ಹೋಗುವ ಮಾನವರೂಪಿ ಮದಾಂಧರಿಗೆ ಸೂಕ್ತ ಸೂಚನೆ ನೀಡುತ್ತದೆ.

"ಆತನ ಬೆರಸಿದ ಕೂಟವನೇನೆಂದು ಹೇಳುವೆನವ್ವಾ ?
ಕೇಳಲೂ ಬಾರದು, ಹೇಳಲು ಬಾರದು, ಏನ ಹೇಳುವೆನವ್ವಾ ?
ಶಿಖಿ ಕರ್ಪೂರವ ಬೆರಸಿದಂತೆ
ಮಹಾಲಿಂಗ ಗಜೇಶ್ವರನ ಕೂಡಿದ ಕೂಟವ ಹೇಳಲು ಬಾರದವ್ವಾ"

ಲಿಂಗಾಂಗ ಸಾಮರಸ್ಯದ ಸವಿಸುಖವನ್ನು ತಿಳಿಸುವ ಮೇಲಣ ವಚನವನ್ನು ಅವಲೋಕಿಸಿ ಮಸಣಯ್ಯನ ಲಿಂಗಭಕ್ತಿಯ ವಿಚಾರ ಅದೆಷ್ಟು ಸೂಕ್ಷ್ಮವಾಗಿ ತಿಳಿಸಿದ್ದಾನೆಂಬುದು ಗೋಚರವಾಗುತ್ತದೆ.

ಹಗಲು ಮನಸಿಂಗಂಜಿ, ಇರುಳು ಕನಸಿಂಗಂಜಿ
ಧ್ಯಾನ ಮೌನಿಯಾಗಿರ್ದಳವ್ವೆ
ಸಖಿ ಬಂದು ಬೆಸಗೊಂಡೊಡೆ ಏನೊಂದು ಹೇಳುವಳವ್ವೆ
ಏನೆಂದು ನುಡಿವಳವ್ವೆ ?



ಸಾಕಾರದಲ್ಲಿ ಸವೆಸದು ನಿರಾಕಾರದಲ್ಲಿ ಅರ್ಪಿಸಿದಡೆ
ಮಹಾಲಿಂಗ ಗಜೇಶ್ವರದೇವನುವಿೀಶ್ವರನಾಗಿರ್ದನಯ್ಯಾ

ಇಲ್ಲಿ ಭಗವಂತನಲ್ಲಿ ಒಂದಾಗಿ ಚೆಂದಾಗಿ ಬೆರೆಯುವ ಭಾವ ಬೆಳಗಿದೆ. ಅಂತರಂಗ ಶುದ್ಧಿಯ ಕಡೆಗೆ ಗಮನ ಕೊಟ್ಟಿದ್ದನೆಂಬುದಕ್ಕೆ ಅನೇಕ ವಚನಗಳು ಸಾಕ್ಷಿ ನುಡಿಯುತ್ತವೆ. ಮನಸ್ಸು ದೇವನಲ್ಲಿ ಮುಳುಗಿದರೆ ಮಾತ್ರ ದೇವರ ಸಾಕ್ಷಾತ್ಕಾರ ಅಥವಾ ಲಿಂಗಾಂಗ ಸಾಮರಸ್ಯ ಸಾಧ್ಯವೆಂದು ಬಹು ಮನೋಹರವಾಗಿ ಈ ವಚನ ನಿವೇದಿಸುತ್ತದೆ.

ಅಷ್ಟ ವಿಧಾರ್ಚನೆ ಷೋಡಷೋಪಚಾರ
ಬಾಹ್ಯ ಕ್ರೀಯಲ್ಲಿ ಲಿಂಗವುಂಟೆ
ಸ್ವಯಮಾತ್ಮ ಪರೋಲಿಂಗವೆಂದುಲಿವ
ಬೀದಿಯ ಭಂಡರ ಮಾತು ಕೇಳಲಾಗದು
ತಿಲ ಕುಸುಮ ಪರಿಮಳದಂತೆ ಒಳಹೊರಗೆ ಪರಿಪೂರ್ಣ
ಮಹಾಲಿಂಗ ಗಜೇಶ್ವರ

ಲಿಂಗಾಂಗ ಸಾಮರಸ್ಯದ ಮಾರ್ಗ ತೋರಿದ ಶರಣರನ್ನು ಹೀಗೆ ಕೊಂಡಾಡಿದ್ದಾನೆ.

"ಎನ್ನ ಕರಸ್ಥಲವೇ ಬಸವಣ್ಣನಯ್ಯ
ಎನ್ನ ಮನಸ್ಥಲವೇ ಚೆನ್ನಬಸವಣ್ಣನಯ್ಯ
ಎನ್ನ ಭಾವಸ್ಥಲವೇ ಪ್ರಭುದೇವರಯ್ಯ
ಇಂತೆನ್ನ ಕರ ಮನ ಭಾವಂಗಳಲ್ಲಿ
ಇಷ್ಟ ಪ್ರಾಣ ಭಾವಂಗಳು ತಲ್ಲೀನವಾಗಿ
ಮಹಾಲಿಂಗ ಗಜೇಶ್ವರಾ ನಿಮ್ಮ ಶರಣರ ಘನವನು
ಎನ್ನ ಸರ್ವಾಂಗದಲ್ಲಿ ಕಂಡು ಪರಮ ಸುಖಿಯಾಗಿರ್ದೆನು

ಗಜೇಶ ಮಸಣಯ್ಯನಲ್ಲಿರುವ ವಿಶಿಷ್ಟ ಗುಣವೆಂದರೆ ಚಿಕ್ಕ ಚಿಕ್ಕ ನುಡಿಯಲ್ಲಿ ಅರ್ಥಗರ್ಭಿತವಾದ ವಿಚಾರಗಳನ್ನು ತುಂಬುವುದು. ಕೆಲವು ಮಾತುಗಳು ಗಾದೆಯ ಮಾತಿನಂತೆ ಪಡೆನುಡಿಯಂತೆ ಸೂತ್ರಪ್ರಾಯವಾಗಿವೆ ಉದಾಹರಣೆಗಾಗಿ :

೧) ಮೂಗಿಯ ಕೋಗಿಲೆಯಂತೆ ಮೂಗನಾಗಿರ್ದೆನವ್ವಾ
೨) ಇದ್ದಿಲ ಹಿಂಡಿದಡೆ ರಸಮುಂಟೆ ?
೩) ಉಪ್ಪಿಲ್ಲದೂಟ ಸಪ್ಪೆಕಾಣಿರೋ
೪) ಉರಗನ ಬಾಯ ಕಪ್ಪೆಯಂತೆ ಸಂಸಾರ

ಹೀಗೆ ತನ್ನ ಅನುಭವ ಅನುಭಾವಗಳನ್ನು ವಚನ ಕಮ್ಮಟದಲ್ಲಿ ರೂಪಿಸಿ ವೀರಶೈವ ಸಿದ್ಧಾಂತವನ್ನು ಬೋಧಿಸಿದ್ದಾನೆ. ಇವನ ವಚನಗಳ ಅಭ್ಯಾಸ ಮಾಡುವುದು ಅತ್ಯವಶ್ಯವಾಗಿದೆ.

# ಕರ್ನಾಟಕದ ಮುನ್ನಡೆ

## ಆರ್ಥಿಕ ಸ್ವಾತಂತ್ರ್ಯದತ್ತ

ಹರಿಜನ—ಗಿರಿಜನ ಹಾಗೂ ಇತರ ಹಿಂದುಳಿದ ವರ್ಗದವರ ಸಮಗ್ರ 'ಏಳಿಗೆಗಾಗಿ ಶ್ರಮಿಸುತ್ತಿರುವ ರಾಜ್ಯ ಕರ್ನಾಟಕ. ರಾಷ್ಟ್ರವು ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸುತ್ತಿರುವ ಈ ಶುಭಸಂದರ್ಭದಲ್ಲಿ ದಲಿತ ವರ್ಗದ ನೆಮ್ಮದಿಯ ಬದುಕಿಗೆ ಅನುಕೂಲವಾಗುವ ಅನೇಕ ಯೋಜನೆಗಳನ್ನು ಕಾರ್ಯಗತ ಗೊಳಿಸಿದ ಕರ್ನಾಟಕ ರಾಜ್ಯ ಹೆಮ್ಮೆಪಡುತ್ತದೆ.

ಶ್ರೀ ಆರ್. ಗುಂಡೂರಾವ್ ಅವರ ದಕ್ಷನಾಯಕತ್ವದಲ್ಲಿ ಕರ್ನಾಟಕ ಸರ್ಕಾರ 20 ಅಂಶಗಳ ಕಾರ್ಯಕ್ರಮವನ್ನು ಅತ್ಯಂತ ನಿಷ್ಠೆಯಿಂದ ಕಾರ್ಯಗತಗೊಳಿಸಿ. ದುರ್ಬಲ ವರ್ಗದ ಜನರೂ ಕೂಡ ಸಮಾಜದ ಇತರ ಜನರೊಂದಿಗೆ ಕೂಡಿ ಬಾಳುವ ಅವಕಾಶಗಳನ್ನು ಒದಗಿಸಿಕೊಟ್ಟಿದೆ.

ಕಡತ ವಿಲೇವಾರಿ ಆಂದೋಲನ ಕೈಗೊಂಡು ಆಡಳಿತ ರಂಗವನ್ನು ಚುರುಕುಗೊಳಿಸಿದ್ದಲ್ಲದೆ ಜನತೆಯ ಸಮಸ್ಯೆಗಳನ್ನು ಅರಿಯಲು ಆಡಳಿತವನ್ನೇ ಜನರ ಬಾಗಿಲಿಗೆ ಕೊಂಡೊಯ್ದ ಶ್ರೇಯಸ್ಸು ಕರ್ನಾಟಕದ್ದು.

ದೇಶದಲ್ಲಿಯೇ ಪ್ರಪ್ರಥಮವಾಗಿ ರೈತನ ಹಿತವನ್ನು ಗಮನದಲ್ಲಿಟ್ಟುಕೊಂಡು ಕೋಟ್ಯಾವಧಿ ರೂಗಳ ರಿಯಾಯಿತಿಯನ್ನು ನೀಡಲಾಗಿದೆ. ಹತ್ತು ಎಕರೆವರೆಗಿನ ಖುಷ್ಕಿ ಜಮೀನಿಗೆ ಭೂ ಕಂದಾಯ ರದ್ದು .ಸಣ್ಣ ರೈತರ ತಕಾವಿ ಸಾಲ ರದ್ದು. ಬೆಳೆ ವಿಮಾ ಯೋಜನೆ, ನೀರಾವರಿ ಪಂಪ್‌ಸೆಟ್ ವಿದ್ಯುತ್ ದರಗಳಲ್ಲಿ ಇಳಿತ, ಅಭಿವೃದ್ಧಿ ತೆರಿಗೆ ರದ್ದು ಹಾಗೂ ನೀರುಕರದ ಪರಿಷ್ಕರಣೆ, ಸಹಕಾರಿ ಸಾಲಕ್ಕೆ ಸುಸ್ತಿ ಬಡ್ಡಿ ಮಾನ್ಹಾ ಮುಂತಾದ ಸೌಲಭ್ಯಗಳನ್ನು ಒದಗಿಸಲಾಗಿದೆ.

ಕೃಷಿ ಕಾರ್ಮಿಕರು ಹೆಂಡ ಇಳಿಸುವವರು. ಮರ ಕಡಿಯುವವರು. ಗೋಡೆಕಟ್ಟುವವರು ಮುಂತಾದ ಕಾರ್ಮಿಕರು ವೃತ್ತಿಯಲ್ಲಿ ನಿರತರಾಗಿದ್ದಾಗ ಆಕಸ್ಮಿಕಕ್ಕೊಳಗಾಗಿ ಮೃತರಾದರೆ ಅವರಿಗೆ 2000 ರೂ. ಗಳ ಪರಿಹಾರ ನೀಡುವ ಯೋಜನೆ 'ಆಶಾ ಕಿರಣ' ಜಾರಿಗೊಳಿಸಲಾಗಿದೆ.

ಪ್ರತಿ ಹಳ್ಳಿಗೂ ಕುಡಿಯವ ನೀರು ಹಾಗು ಶಾಲೆ ಒದಗಿಸಲು ಕ್ರಮಕೈಗೊಳ್ಳಲಾಗಿದೆ. ಮಂಗಳೂರು ಹಾಗೂ ಗುಲ್ಬರ್ಗಾ ವಿಶ್ವವಿದ್ಯಾಲಯಗಳು ಮತ್ತು ಮುಂದಿನ ವರ್ಷ ಪ್ರಾರಂಭವಾಗುವ ಮಲೆನಾಡು ವಿಶ್ವವಿದ್ಯಾನಿಲಯಗಳು ಉನ್ನತ ಶಿಕ್ಷಣಕ್ಕೆ ಸಹಾಯಕವಾಗಿವೆ.



ಇಲ್ಲಿಯವರೆಗೆ 2.75 ಲಕ್ಷ ಮನೆಗಳನ್ನು ಬಡವರಿಗಾಗಿ ಕಟ್ಟಿಕೊಡಲಾಗಿದೆ. ಈ ವರ್ಷ ಇನ್ನೂ 1 ಲಕ್ಷ ಮನೆಗಳನ್ನು ಕಟ್ಟಲಾಗುವುದು.

ಭೂ ಸುಧಾರಣೆ ಕಾಯ್ದೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿದುದರಿಂದಾಗಿ ಸುಮಾರು 5 ಲಕ್ಷ ಗೇಣಿದಾರರು 21 ಲಕ್ಷ ಎಕರೆ ಭೂಮಿಯ ಒಡೆತನ ಪಡೆದಿದ್ದಾರೆ ಹೆಚ್ಚುವರಿ ಭೂಮಿಯನ್ನು ಗುರುತಿಸಿ ಭೂ ರಹಿತರಿಗೆ ಹಂಚುವ ಕಾರ್ಯ ಭರದಿಂದ ಸಾಗಿದೆ. ಹರಿಜನ ಅಭಿವೃದ್ಧಿಗಾಗಿ ವಿಶೇಷ ಘಟಕ ಯೋಜನೆಯೊನ್ನು ಜಾರಿಗೊಳಿಸಲಾಗುತ್ತಿದ್ದು. 6 ನೆಯ ಯೋಜನೆಯ ಅಂತ್ಯದ ವೇಳೆಗೆ 5.30 ಲಕ್ಷ ಹರಿಜನ ಕುಟುಂಬಗಳನ್ನು ಬಡತನ ರೇಖೆಯಿಂದ ಮೇಲಕ್ಕೆತ್ತಲಾಗುವುದು. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಮುಖಾಂತರ ಅನೇಕ ಬಡವರಿಗೆ ಸಹಾಯನೀಡಲು 14 ಕೋಟಿ ರೂಗಳನ್ನು ಒದಗಿಸಲಾಗಿದೆ.

ಕನ್ನಡವನ್ನು ಕಡ್ಡಾಯಗೊಳಿಸುವುದರ ಮೂಲಕ ವಿಶ್ವ ಕನ್ನಡ ಸಮ್ಮೇಳನಕ್ಕೆ ಭದ್ರ ಬುನಾದಿಯನ್ನು ಹಾಕಲಾಗಿದೆ. ಜಾನಪದ ಅಕಾಡೆಮಿಯ ಸ್ಥಾಪನೆ. ಹಂಪೆಯ ಪುನರುಜ್ಜೀವನ ಬೃಂದಾವನ ಉದ್ಯಾನದ ನವೀಕರಣ ಸಾಂಸ್ಕೃತಿಕ ರಂಗದಲ್ಲಿಯ ನಮ್ಮ ಸಾಧನೆಗಳು.

**ಪ್ರಕಟಣೆ : ಕರ್ನಾಟಕ ಸರ್ಕಾರದ, ವಾರ್ತಾ ಮತ್ತು ಪ್ರಚಾರ ಇಲಾಖೆ.**

